ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ವಿಶ್ವಾಸದ ಶಕ್ತಿಯು ಅಪಾರವಾಗಿದೆ, ಅಜೇಯವಾಗಿದೆ. ಆದರ್ಶ ವಿಶ್ವಾಸವನ್ನು ಮೈಗೂಡಿಸಿದ ಮನಸ್ಸುಗಳು ಅದ್ಭುತ ಸ್ಥೈರ್ಯ ಪಡೆಯುತ್ತವೆ. ಅವುಗಳ ವಾಹಕರನ್ನು ಅಧೀನಪಡಿಸಲು ಸೆರೆಮನೆ ಅಥವಾ ನೇಣುಗಂಭಗಳಿಗೆ ಸಾಧ್ಯವಿಲ್ಲ. ಖಡ್ಗ, ಲಾಠಿ, ಹಿಂಸೆ, ದೌರ್ಜನ್ಯಗಳು ಅವರ ಮುಂದೆ ಸೋಲುತ್ತವೆ. ಜನ ಮತ್ತು ಹಣ ಬಲವು ನಿಷ್ಪ್ರಯೋಜಕವಾಗುತ್ತವೆ. ಆಮಿಷ, ಬೆದರಿಕೆಗಳು ಸಂಪೂರ್ಣ ವಿಫಲವಾಗುತ್ತವೆ. ಪ್ರಬಲ ಅಧಿಕಾರ ಶಕ್ತಿಗಳಿಗೂ ಆದರ್ಶ ವಿಶ್ವಾಸಗಳಲ್ಲಿ ಅಚಲರಾಗಿರುವವರನ್ನು ಮಣಿಸಲು ಸಾಧ್ಯವಿಲ್ಲ. ಕಾಲದ ಪ್ರವಾಹದಲ್ಲಿ ಸ್ವಲ್ಪವೂ ಮಸುಕಾಗದೆ ಪ್ರಜ್ವಲಿಸುವ ನಾಲ್ವರು ಇಮಾಮರ ಜೀವನವು ಅದಕ್ಕೆ ಸಾಕ್ಷಿಯಾಗಿದೆ.

ಅಧಿಕಾರ ಪಿಪಾಸುಗಳಾದ ದುರಾಡಳಿತಗಾರರ ಸ್ತುತಿಪಾಠಕರಾಗಲೊಪ್ಪದ ವಿದ್ವಾಂಸರಿಂದ ಹೊರಡುವ ಮಾತುಗಳು, ಅನ್ಯಾಯದ ವಿರುದ್ಧ ಕೊನೆಯುಸಿರಿನ ತನಕ ಹೋರಾಡುವ ವೀರ ಯೋಧರಿಗಿಂತ ಪರಿಣಾಮಕಾರಿಯಾಗಿವೆ. ಅನ್ಯಾಯವನ್ನು ಆದರ್ಶಗೊಳಿಸಿದ ಆಡಳಿತಗಾರರಿಗೆ, ಅವರ ತಪ್ಪುಗಳನ್ನು ಬೊಟ್ಟು ಮಾಡುವವರು ಅಕ್ಷಮ್ಯ ಅಪರಾಧಿಗಳಾಗಿ ಕಾಣುತ್ತಾರೆ. ಬೆಳಕನ್ನು ದ್ವೇಷಿಸುವ ಆ ಮಂದಿ ಪ್ರಕಾಶ ಬೀರುವ 'ದೀವಿಗೆ'ಗಳನ್ನು ಊದಿ ನಂದಿಸಲು ಪ್ರಯತ್ನಿಸುತ್ತಾರೆ. ಅಂತಹ ಸಂದರ್ಭಗಳಲ್ಲಿ ಕೆಡುಕಿನ ರಥವನ್ನು ಚಲಾಯಿಸಲು ಬಿಡುವುದಿಲ್ಲವೆಂದು ನಿರ್ಧರಿಸಿ ಕತ್ತಲೆಯನ್ನು ಹೊಡೆದೋಡಿಸಲು ಸಿದ್ಧರಾಗುವವರು ಪೀಳಿಗೆಗಳಿಗೆ ಪ್ರಕಾಶ ಚೆಲ್ಲುತ್ತಾರೆ. ಇಮಾಮ್ ಅಬೂ ಹನೀಫ, ಇಮಾಮ್ ಮಾಲಿಕ್ ಬಿನ್ ಅನಸ್, ಇಮಾಮ್ ಶಾಫಿಈ ಮತ್ತು ಇಮಾಮ್ ಅಹ್ಮದ್ ಬಿನ್ ಹಂಬಲ್(ರ) ಇವರೆಲ್ಲರೂ ಅತ್ಯಂತ ಪ್ರತಿಕೂಲ ಪರಿಸ್ಥಿತಿಯಲ್ಲೂ ಸಮಾಜವನ್ನು ಸನ್ಮಾರ್ಗದಲ್ಲಿ ಮುನ್ನಡೆಸಲು ಪ್ರಯತ್ನಿಸಿದ್ದರು. ಆದ್ದರಿಂದಲೇ ಅವರು ಕ್ರೂರ ಹಿಂಸೆಗಳಿಗೆ ಗುರಿಯಾದರು. ಛಡಿಯೇಟು, ಕೈಕೋಳ ಮತ್ತು ಸೆರೆಮನೆಗಳು ಅವರನ್ನು ಸ್ವಾಗತಿಸಿದುವು. ಆದರೆ ಅವುಗಳಿಂದ ಅವರ ಮನೋಬಲವನ್ನು ಮುರಿಯಲಾಗಲಿಲ್ಲ. ತೀವ್ರ ಬೆದರಿಕೆ ಮತ್ತು ಆಮಿಷಗಳಿಂದಲೂ ಅವರನ್ನು ವಿಚಲಿತಗೊಳಿಸಲಾಗಲಿಲ್ಲ. ಸಂಕಷ್ಟಗಳ ಮಧ್ಯೆಯೂ ಜ್ಞಾನ ಸಾಗರದಲ್ಲಿ ಮುಳುಗಿ ಅಮೂಲ್ಯ ಮುತ್ತುಗಳನ್ನು ಹೆಕ್ಕಿ ಸಮಾಜಕ್ಕೆ ಸಮರ್ಪಿಸಿದರು. ಪವಿತ್ರ ಕುರ್‌ಆನ್ ಮತ್ತು ಪ್ರವಾದಿಚರ್ಯೆಯನ್ನು ಪರಿಚಯಗೊಳಿಸುವ ಇಸ್ಲಾಮೀ ಜೀವನ ನಿರ್ವಹಣೆಗೆ ಸಹಾಯಕವಾದ ಕರ್ಮಶಾಸ್ತ್ರ ಧಾರೆಗಳನ್ನು ರೂಪಿಸುವ ನಿಟ್ಟಿನಲ್ಲಿ ನಾಲ್ವರು ಇಮಾಮರೂ ಪ್ರಮುಖ ಪಾತ್ರ ವಹಿಸಿ ಅದ್ಭುತ ಯಶಸ್ಸು ಸಾಧಿಸಿದ್ದರು. ಇಂದಿಗೂ ಜಾಗತಿಕ ಮುಸ್ಲಿಮರಲ್ಲಿ ಹೆಚ್ಚಿನವರು ತಮ್ಮ ಜೀವನದಲ್ಲಿ ಅವರ ಕರ್ಮಧಾರೆಗಳನ್ನು ಅವಲಂಬಿಸುತ್ತಾರೆ.

ಈ ಕಿರುಕೃತಿಯಲ್ಲಿ ನಾಲ್ವರು ಇಮಾಮರ ಘಟನಾವಳಿಗಳಿಂದ ತುಂಬಿದ, ಜೀವನಾನುಭವಗಳಿಂದ ಆಯ್ದ ತುಣುಕುಗಳನ್ನು ಮನೋಹರವಾಗಿ ಜೋಡಿಸಲಾಗಿದೆ. ಇದು ವಾಚಕರ ಮನಸ್ಸುಗಳನ್ನು ಬೆಳಗಿಸಿ ಸ್ಫೂರ್ತಿ ನೀಡುವುದೆಂದು ನಿರೀಕ್ಷಿಸುತ್ತೇವೆ.

**ಶಾಂತಿ ಪ್ರಕಾಶನ**

# ಅನುಕ್ರಮಣಿಕೆ



ಉರಿಯುತ್ತಿರುವ ಮರುಭೂಮಿಯಲ್ಲಿಯೂ ಆರಿ ಹೋಗದ ಒರತೆಗಳಿರುತ್ತವೆ. ಸೂರ್ಯ ತಾಪಕ್ಕೆ ಅವುಗಳನ್ನು ಒಣಗಿಸಲಾಗುವುದಿಲ್ಲ. ಅವುಗಳ ಕಾರ್ಯಭಾರವು ಅತಿ ಶ್ರೇಷ್ಠವಾಗಿದೆ. ದಾಹದಿಂದ ಬಳಲಿದ ದಾರಿಹೋಕರಿಗೆ ಶಮನ ನೀಡುವ ಉಜ್ವಲ ಕಾರ್ಯಭಾರವನ್ನು ನಿರ್ವಹಿಸುವವರು ಅಮರರಾಗುತ್ತಾರೆ. ಪ್ರತಿಕೂಲ ಪರಿಸ್ಥಿತಿಯಲ್ಲೂ ಸಮಾಜವನ್ನು ಸನ್ಮಾರ್ಗದಲ್ಲಿ ಮುನ್ನಡೆಸಲು ಪ್ರಯತ್ನಿಸಿದ ನಾಲ್ವರು ಇಮಾಮರ ಜೀವನವು ಅದಕ್ಕೆ ಸಾಕ್ಷಿಯಾಗಿದೆ.

# ಇಮಾಮ್ ಅಬೂ ಹನೀಫ (ರ)

## (ಹಿಜರಿ.80 -150/ ಕ್ರಿ.ಶ.69-767)

ಹನಫೀ ಮದ್ಹಬ್‌ನ ಮೂಲ ಪುರುಷ. ಪ್ರಮುಖ ಇಸ್ಲಾಮಿ ಕಾನೂನು ತಜ್ಞ. ನಾಲ್ಕು ಕರ್ಮಶಾಸ್ತ್ರ ಮದ್ಹಬ್‌ಗಳ ಇಮಾಮ್‌ಗಳಲ್ಲಿ ಮೊದಲ ವ್ಯಕ್ತಿ. ಮೂಲ ಹೆಸರು ನುಅ್‌ಮಾನ್. ಕೂಫಾದಲ್ಲಿ ಹುಟ್ಟಿದರು. ಪಿತಾಮಹ ಸೂತ್ವಾ, ಕಾಬೂಲ್‌ನಿಂದ ಯುದ್ಧ ಖೈದಿಯರು ಅಬೂ ಹನೀಫಾರು ಅನಸ್ ಬಿನ್ ಮಾಲಿಕ್ ಮತ್ತು ಇತರ ಕೆಲವು ಸಹಾಬಿಗಳನ್ನು ನೋಡಿದ್ದರು. ಇಮಾಮ್ ಜಅ್‌ಫರ್ ಮತ್ತು ಪ್ರಮುಖ ತಾಬಿಈಗಳಿಂದ ಶಿಕ್ಷಣ ಗಳಿಸಿದ್ದರು. ಪರಂಪರಾಗತ ಉದ್ಯೋಗವಾಗಿದ್ದ ಬಟ್ಟೆ ವ್ಯಾಪಾರ ನಡೆಸಿ ಜೀವನ ಸಾಗಿಸುತ್ತಿದ್ದರು. ಮಹಾಭಕ್ತ ಮತ್ತು ಧರ್ಮಿಷ್ಠರಾಗಿದ್ದರು. ಅಧ್ಯಾಪಕ ಮತ್ತು ಮುಫ್ತಿಯಾಗಿ ಸೇವೆ ಸಲ್ಲಿಸಿದ್ದರು. ಕರ್ಮಶಾಸ್ತ್ರವನ್ನು(ಫಿಕ್ಹ್) ಅವರು ಪ್ರಥಮವಾಗಿ ಅಧ್ಯಾಯ ಮತ್ತು ಉಪ ಅಧ್ಯಾಯಗಳಾಗಿ ವಿಂಗಡಿಸಿದರು. ಅವರ ವಿಚಾರಧಾರೆಯು ಇರಾಕೀ ಕರ್ಮಶಾಸ್ತ್ರ ಶಾಖೆಗೆ ಬುನಾದಿಯಾಯಿತು. ಅನೇಕ ಸಂಶೋಧಕರನ್ನು ರೂಪಿಸಿದರು. ಆ ಮಂದಿ ಅವರ ಮದ್ಹಬನ್ನು ವ್ಯಾಖ್ಯಾನಿಸಿ ಪ್ರಚಾರಗೊಳಿಸಿ ಅನೇಕ ಗ್ರಂಥಗಳನ್ನೂ ರಚಿಸಿದರು. ತರುವಾಯ ಹನಫೀ ಮದ್ಹಬ್, ಅಬ್ಬಾಸಿ, ಉಸ್ಮಾನಿ ರಾಷ್ಟ್ರಗಳ ಮತ್ತು ಈಜಿಪ್ಟ್‌ನ ಅಧಿಕೃತ ಮದ್ಹಬ್ ಆಗಿ ಅಂಗೀಕೃತವಾಯಿತು.

ಅಬೂ ಹನೀಫಾರ ಪ್ರಮುಖ ಕೃತಿಗಳು: 'ಅಲ್ ಫಿಕ್ಹುಲ್ ಅಕ್ಬರ್', 'ಮುಸ್ನದ್ ಅಬೀ ಹನೀಫ'.

ಆರಂಭದಲ್ಲಿ ಉಮವೀ ಆಡಳಿತದ ವಿರುದ್ಧ ಅಬ್ಬಾಸೀ ದಂಗೆಯನ್ನು ಬೆಂಬಲಿಸಿದ ಇಮಾಮ್‌ರಿಗೆ ಅಬ್ಬಾಸೀ ದುರಾಡಳಿತವು ಅಸಹ್ಯವಾಯಿತು. ಬಸ್ರಾದಲ್ಲಿ ಝೈದೀ ಶಿಯಾಗಳ ನಾಯಕರಾದ ಇಬ್ರಾಹೀಮ್ ಬಿನ್ ಮುಹಮ್ಮದರ ನಾಯಕತ್ವದಲ್ಲಿ ಅಬ್ಬಾಸೀ ಸರಕಾರದ ವಿರುದ್ಧ ನಡೆದ ದಂಗೆಯಲ್ಲಿ ಅಬೂ ಹನೀಫಾರು ಝೈದಿಗಳನ್ನು ಬೆಂಬಲಿಸಿದರು.

ಮುಖ್ಯ ನ್ಯಾಯಾಧೀಶ(ಕಾಝಿ) ಸ್ಥಾನವೂ ಸೇರಿದಂತೆ ಆ ಕಾಲದ ಆಡಳಿತಗಾರರು ಉನ್ನತ ಹುದ್ದೆಗಳ ಕೊಡುಗೆ ನೀಡಿದರೂ ಅವರು ಸ್ವೀಕರಿಸಲಿಲ್ಲ. ಕೊನೆಗೆ ಬಗ್ದಾದ್‌ನ ಕಾಝಿಯಾಗಬೇಕೆಂಬ ಖಲೀಫಾ ಮನ್ಸೂರರ ಆಮಂತ್ರಣವನ್ನು ನಿರಾಕರಿಸಿದ್ದರಿಂದ ಅವರನ್ನು ಜೈಲಿಗೆ ಹಾಕಿ ಛಡಿಯೇಟು ಶಿಕ್ಷೆ ನೀಡಲಾಯಿತು. ಜೈಲಿನಲ್ಲಿಯೇ ಅವರು ನಿಧನರಾದರು. ಅವರು 70 ವರ್ಷ ಬಾಳಿದರು.

ಇಮಾಮ್ ಅಬೂ ಹನೀಫಾರ ನೆರೆಮನೆಯಲ್ಲಿ ಓರ್ವ ಚಮ್ಮಾರ ವಾಸಿಸುತ್ತಿದ್ದ. ಮಹಾ ಕುಡುಕನಾಗಿದ್ದ. ಸೂರ್ಯ ಮುಳುಗುವ ತನಕ ಕೆಲಸ ಮಾಡುತ್ತಿದ್ದ. ರಾತ್ರಿ ತಡವಾಗಿ ಮನೆಗೆ ಮರಳುವಾಗ ಮೂಗಿನ ತನಕ ಕುಡಿಯುತ್ತಿದ್ದ. ತರುವಾಯ ರಾತ್ರಿಯಿಡೀ ಬೊಬ್ಬೆ, ಗಲಾಟೆ, ಗಾಯನ.

''ಅವರು ನನ್ನನ್ನು ಹಾಳು ಮಾಡಿದರು. ಎಷ್ಟೊಂದು ಉತ್ತಮ ಯುವಕನನ್ನು ಹಾಳು ಮಾಡಿದ್ದಾರೆ. ಯುದ್ಧ ಮತ್ತು ಗಡಿ ರಕ್ಷಣೆಗೆ ಸಮರ್ಥನಾದವನು!'' ಎಂದು ಕವನದ ಗೆರೆಗಳನ್ನು ಬೆಳಗ್ಗಿನ ತನಕ ಹಾಡುತ್ತಿದ್ದ.

ರಾತ್ರಿ ನಮಾಝ್ ಮತ್ತು ಕುರ್‌ಆನ್ ಪಾರಾಯಣ ಮಾಡುವ ಅಬೂ ಹನೀಫಾರಿಗೆ ಅದರಿಂದ ಭಾರೀ ತೊಂದರೆಯಾಗುತ್ತಿತ್ತು. ಆದರೆ ಅವರು ಆ ಬಗ್ಗೆ ಏನೂ ಹೇಳಲಿಲ್ಲ ಅಥವಾ ದೂರಲಿಲ್ಲ. ಮಾತ್ರವಲ್ಲ ನೆರೆಯಾತನೊಡನೆ ಉತ್ತಮ ರೀತಿಯಲ್ಲಿ ವರ್ತಿಸಿದರು.

ಹೀಗಿರುತ್ತಾ ಒಂದು ದಿನ ನೆರೆಮನೆಯವನ ಗಲಾಟೆ ಕೇಳಿಸಲಿಲ್ಲ. ವಿಚಾರಿಸಿದಾಗ ಪೊಲೀಸರು ಆತನನ್ನು ಬಂಧಿಸಿ ಜೈಲಿಗೆ ಹಾಕಿರುವರೆಂದು ತಿಳಿಯಿತು.

ಮರುದಿನ ಪ್ರಭಾತ ನಮಾಝ್ ನಿರ್ವಹಿಸಿ ಕೂಡಲೇ ಇಮಾಮರು ರಾಜ್ಯಪಾಲರ ಭವನಕ್ಕೆ ಹೋದರು.

ರಾಜ್ಯಪಾಲರು ಇಮಾಮರನ್ನು ಗೌರವದಿಂದ ಸ್ವಾಗತಿಸಿ ಕುಳ್ಳಿರಿಸಿದರು.

''ನನ್ನ ಓರ್ವ ನೆರೆಯಾತನನ್ನು ಪೊಲೀಸರು ಬಂಧಿಸಿ ಜೈಲಿಗೆ ಹಾಕಿದ್ದಾರೆ. ಆತನ ಬಿಡುಗಡೆಗೆ ಆಜ್ಞಾಪಿಸಬೇಕು'' ಇಮಾಮ್ ವಿನಂತಿಸಿದರು.

ಅಬೂ ಹನೀಫಾ ಮತ್ತು ನೆರೆಯಾತ ಒಟ್ಟಿಗೆ ಮರಳಿದರು. ''ಎಲೈ ಯುವಕನೇ, ನಾವು ನಿನ್ನನ್ನು ಹಾಳು ಮಾಡಿರುವೆವೇ'' ಅಬೂ ಹನೀಫ ನಗುತ್ತಾ ಪ್ರಶ್ನಿಸಿದರು.

''ಇಲ್ಲ, ಹಾಳು ಮಾಡಲಿಲ್ಲ, ನೀವು ಈ ಪಾಪಿಯನ್ನು ರಕ್ಷಿಸಿದ್ದೀರಿ. ನಿಮ್ಮ ನೆರೆಕರೆಯು ನನಗೆ ಉಪಕಾರವಾಯಿತು. ಅಲ್ಲಾಹನು ನಿಮಗೆ ಧಾರಾಳ ಪ್ರತಿಫಲವನ್ನು ನೀಡಲಿ.''

ಅಂದಿನಿಂದ ಆತ ಹಳೆಯ ದುರ್ಗುಣವನ್ನು ತೊರೆದು ಪಶ್ಚಾತ್ತಾಪ ಪಟ್ಟು ಇಮಾಮ್‌ರ ಶಿಷ್ಯತ್ವವನ್ನು ಸ್ವೀಕರಿಸಿ ಉತ್ತಮನಾಗಿ ಬಾಳಿದ.

★★★★★★

ಒಬ್ಬರು ತಮ್ಮ ಹಣವನ್ನು ಸುರಕ್ಷಿತವಾಗಿಡಲಿಕ್ಕಾಗಿ ಹಿತ್ತಲಿನಲ್ಲಿ ಹೂತಿಟ್ಟರು. ಆದರೆ ಆ ಬಳಿಕ ಅವರಿಗೆ ಆ ಸ್ಥಳ ಮರೆತು ಹೋಯಿತು. ಎಷ್ಟು ಪ್ರಯತ್ನಿಸಿದರೂ ಸ್ಥಳದ ಗುರುತು ಸಿಗಲಿಲ್ಲ. ನಿರಾಶೆಯಿಂದ ಅವರು ಇಮಾಮ್ ಅಬೂ ಹನೀಫಾರ ಬಳಿಗೆ ಬಂದು ಅಹವಾಲು ಹೇಳಿದರು.

''ಸ್ಥಳವನ್ನು ನಾನು ಹೇಗೆ ಹುಡುಕಲಿ. ನೀನು ಒಂದು ಕೆಲಸ ಮಾಡು. ಇಂದು ರಾತ್ರಿ ನೀನು ನಮಾಝ್ ಮಾಡು'' ಅವರು ಹೇಳಿದರು.

ಅವರು ಹಾಗೆಯೇ ಮಾಡಿದರು. ರಾತ್ರಿ ನಿರಂತರ ನಮಾಝ್ ಮಾಡುತ್ತಿದ್ದರು. ಹೀಗೆ ರಾತ್ರಿಯ ನಾಲ್ಕನೇ ಒಂದು ಭಾಗ ಕಳೆದಾಗ ಹಣ ಹೂತಿಟ್ಟ ಸ್ಥಳದ ನೆನಪಾಯಿತು.

ಕೂಡಲೇ ಅವರು ಅಬೂ ಹನೀಫಾರ ಬಳಿಗೆ ಹೋಗಿ ವಿವರ ತಿಳಿಸಿದರು. ''ನನಗೆ ಅನಿಸಿತ್ತು. ಪಿಶಾಚಿಯು ನಿನ್ನನ್ನು ನಮಾಝ್ ಮಾಡಲು ಬಿಡಲಾರದೆಂದು. ಮರೆತ ವಿಷಯವು ನಮಾಝ್‌ನಲ್ಲಿಯೇ ನೆನಪಾಗುವುದಷ್ಟೆ. ಈಗ ನೆನಪಾಗಿರುವುದರಿಂದ ಬೆಳಗ್ಗಿನ ತನಕ ದೇವನಿಗೆ ಕೃತಜ್ಞನಾಗಿ ನಮಾಝ್ ಮಾಡಬಹುದಿತ್ತಲ್ಲವೇ?

★★★★★★

ಇಮಾಮ್ ಅಬೂ ಹನೀಫಾರು ಬಸ್ರಾದಲ್ಲಿ ಬಟ್ಟೆ ವ್ಯಾಪಾರ ನಡೆಸುತ್ತಿದ್ದ ಕಾಲ. ಅವರ ನೆರವಿಗಾಗಿ ಓರ್ವ ಮಾರಾಟಗಾರನಿದ್ದ.

ಅದೊಂದು ದಿನ ಏನೋ ಅಗತ್ಯಕ್ಕಾಗಿ ಇಮಾಮರು ಹೊರಗೆ ಹೋಗಬೇಕಾಯಿತು. ತುಂಬಾ ತಡವಾಗಿ ಮರಳಿ ಬಂದರು.

ಅಂದು ರಾತ್ರಿ ಲೆಕ್ಕ ನೋಡಿದಾಗ ಒಂದು ತಪ್ಪು! ಹಣವು ಲೆಕ್ಕಕ್ಕಿಂತ ಅಧಿಕವಿತ್ತು !

''ಇದು ಹೇಗಾಯಿತು? ಇಮಾಮರು ಸಹಾಯಕನತ್ತ ಆಶ್ಚರ್ಯದಿಂದ ನೋಡಿದರು.''

''ಅದು, ಓರ್ವ ಪರದೇಶಿ ಬಟ್ಟೆ ಖರೀದಿಗಾಗಿ ಬಂದಿದ್ದ. ನಾನು ಅವನಿಂದ ಸ್ವಲ್ಪ ಹೆಚ್ಚು ಲಾಭ ತೆಗೆದುಕೊಂಡೆ''.

ಇದನ್ನು ಕೇಳಿ ಇಮಾಮರಿಗೆ ಸಿಟ್ಟು ಬಂತು. ಆ ಕೂಡಲೇ ಸೇವಕನನ್ನು ವಜಾಗೊಳಿಸಿ ದರು. ''ಬಟ್ಟೆ ಖರೀದಿಸಿದ ವ್ಯಕ್ತಿಯನ್ನು ಭೇಟಿಯಾಗಿ ಅವರಿಂದ ಹೆಚ್ಚಿಗೆ ಪಡೆದ ಹಣವನ್ನು ಮರಳಿಸಬೇಕು. ಅನ್ಯಥಾ ನಿನ್ನನ್ನು ಕೆಲಸಕ್ಕೆ ಸೇರಿಸುವುದಿಲ್ಲ''.ಇಮಾಮ್ ಹೇಳಿದರು.

ಪಾಪ, ಆ ಬಡಪಾಯಿ ಸೇವಕ ಲಾಭ ಹೆಚ್ಚು ತೆಗೆದುಕೊಂಡರೆ ಮಾಲಕರಿಗೆ ಸಂತೋಷವಾಗಬಹುದೆಂದು ಭಾವಿಸಿದ್ದ. ಸಾಮಾನ್ಯವಾಗಿ ಹಾಗೆಯೇ ನಡೆಯುತ್ತದಲ್ಲವೇ?

ಸೇವಕನು ಬಟ್ಟೆ ಖರೀದಿಸಿದ ಗಿರಾಕಿಯನ್ನು ಹುಡುಕುತ್ತಾ ಹೊರಟನು. ಪರದೇಶಿ, ಪರಿಚಯವಿಲ್ಲ, ಪತ್ತೆ ಹಚ್ಚುವುದು ಹೇಗೆ? ಅನೇಕ ಕಡೆಗಳಲ್ಲಿ ಸುತ್ತಾಡಿದ, ತಿಂಗಳುಗಟ್ಟಲೆ ಪೇಟೆ ಪಟ್ಟಣಗಳಲ್ಲಿ ಹುಡುಕಾಡಿದ.

ಸುದೀರ್ಘ ಹುಡುಕಾಟದ ಬಳಿಕ ಒಂದೆಡೆ ಆತನನ್ನು ಸಂಧಿಸಿದ. ''ಮಿತ್ರಾ, ಹಲವು ತಿಂಗಳುಗಳಿಂದ ನಿನ್ನನ್ನು ಹುಡುಕುತ್ತಾ ಅಲೆದಾಡುತ್ತಿದ್ದೇನೆ! ಏಕೆಂದು ತಿಳಿದಿದೆಯೇ? ಅಂದಿನ ವ್ಯಾಪಾರದಲ್ಲಿ ಸ್ವಲ್ಪ ಎಡವಟ್ಟಾಗಿದೆ.'' ಎಂದು ಸೇವಕ ತಿಳಿಸಿದ.

''ಅಯ್ಯೋ! ನಾನು ಆ ಬಟ್ಟೆಯನ್ನು ಹೊಲಿಸಿ ಅಂಗಿ ಮಾಡಿಸಿದ್ದೇನೆ. ಇದು ಅದೇ ಅಂಗಿ. ನಾನು ಎಷ್ಟು ಕೊಡಬೇಕು?

''ಛೆ! ನೀವು ಕೊಡಲಿಕ್ಕಿಲ್ಲ, ನಾನು ನಿಮ್ಮಿಂದ ಹೆಚ್ಚು ಹಣ ತೆಗೆದುಕೊಂಡಿದ್ದೇನೆ. ಅದಕ್ಕಾಗಿ ಮಾಲಿಕರು ನನ್ನನ್ನು ಅಂಗಡಿಯಿಂದ ಹೊರಹಾಕಿದರು! ಆ ಹಣವನ್ನು ಮರಳಿಸಲಿಕ್ಕಾಗಿ ನಾನು ಬಂದಿದ್ದೇನೆ.'' ಸೇವಕ ಹಣ ಮರಳಿಸಿದ. ಇಮಾಮರ ಬಳಿ ಬಂದು ವಿಷಯ ತಿಳಿಸಿದ. ಸಂತೃಪ್ತರಾದ ಇಮಾಮರು ಆತನನ್ನು ಪುನಃ ಕೆಲಸಕ್ಕೆ ಸೇರಿಸಿದರು.

★★★★★★

ಇಮಾಮ್ ಅಬೂ ಹನೀಫಾರ ಓರ್ವ ಮಿತ್ರನಿಗೆ ಬಟ್ಟೆ ಬೇಕಾಗಿತ್ತು. ಇಮಾಮರ ಅಂಗಡಿಯಲ್ಲಿದೆಯೇ ಎಂದು ವಿಚಾರಿಸಿದರು.

''ಯಾವ ಬಣ್ಣ?''

''ಇಂಥ ಬಣ್ಣ''

''ಇದೋ ನೀವು ಕೇಳಿದ ಬಟ್ಟೆ.'' ಕೆಲವು ದಿನದ ಬಳಿಕ ಇಮಾಮ್ ಹೇಳಿದರು.

''ಇದರ ಬೆಲೆ ಎಷ್ಟು?''

''ಒಂದು ದಿರ್ಹಮ್''

''ತಮಾಷೆ ಮಾಡಬೇಡಿ, ಸರಿಯಾಗಿ ಹೇಳಿ.''

''ಸರಿಯೇ ಆಗಿದೆ. ನಾನು 2 ಬಟ್ಟೆ ಖರೀದಿಸಿದೆ. 20 ದೀನಾರ್ ಮತ್ತು ಒಂದು ದಿರ್ಹಮ್ ಕೊಟ್ಟೆ, ಒಂದು ಬಟ್ಟೆಯನ್ನು 20 ದೀನಾರ್‌ಗೆ ಮಾರಿದೆ. ಇದು ಇನ್ನೊಂದು ಬಟ್ಟೆ. ನೀವು ಒಂದು ದಿರ್ಹಮ್ ನೀಡಿದರೆ ಸಾಕು. ಮಿತ್ರನಲ್ಲವೇ ಲಾಭವೇನೂ ಬೇಡ.''

ಕೃತಜ್ಞತೆಯಿಂದ ಅವರು ಅದನ್ನು ಸ್ವೀಕರಿಸಿಕೊಂಡರು.

★★★★★★

ಇಮಾಮ್ ಅಬೂ ಹನೀಫಾರ ಕಿರಿಯ ಮಗ ಇಸ್ಮಾಈಲ್ ಬಿನ್ ಹಮ್ಮಾದ್ ಒಮ್ಮೆ ಹೇಳಿದರು:

ಅಬೂ ಹನೀಫಾರ ಪಿತಾಮಹ ಸೂತ್ವಾ, ನಾಲ್ಕನೇ ಖಲೀಫ ಅಲೀ ಬಿನ್ ಅಬೂ ತಾಲಿಬರಿಗೆ ಬಹಳ ಆಪ್ತರಾಗಿದ್ದರು. ಆಗಾಗ ಖಲೀಫಾರನ್ನು ಭೇಟಿಯಾಗುತ್ತಿದ್ದರು. ಒಮ್ಮೆ ಪುತ್ರ ಸಾಬಿತ್‌ನನ್ನೂ ಕರೆದೊಯ್ದಿದ್ದರು. ಆಗ ಅಲೀ(ರ) ಸೂತ್ವಾರಿಗೂ, ಮುಂದಿನ ಪೀಳಿಗೆಗಾಗಿಯೂ ಪ್ರಾರ್ಥಿಸಿದರು.

''ಆ ಪ್ರಾರ್ಥನೆಯನ್ನು ಅಲ್ಲಾಹ್ ಆಲಿಸಿದನು, ಅದರ ಫಲವಾಗಿ ಅಬೂ ಹನೀಫಾರು ಈ ಮನೆತನದಲ್ಲಿ ಹುಟ್ಟಿದರು.'' ಇದು ಅಬೂ ಹನೀಫಾರ ಕಿರಿಯ ಮಗ ಇಸ್ಮಾಈಲ್ ಬಿನ್ ಹಮ್ಮಾದ್‌ರ ಮಾತುಗಳಾಗಿವೆ.

★★★★★★

ಸಾಮಾನ್ಯವಾಗಿ ವ್ಯಾಪಾರದ ಬಗ್ಗೆ ಗಮನಹರಿಸುತ್ತಿದ್ದ ಅಬೂ ಹನೀಫಾರನ್ನು ಇಮಾಮ್ ಶಅಬಿಯವರು ಪಾಂಡಿತ್ಯ ರಂಗಕ್ಕೆ ಆಕರ್ಷಿಸಿದ್ದರು. ಆ ಘಟನೆಯನ್ನು ಅಬೂ ಹನೀಫಾರು ಹೀಗೆ ವಿವರಿಸುತ್ತಾರೆ. ''ನಾನು ಒಂದು ದಿನ ಶಅಬಿಯವರ ಬಳಿಯಿಂದ ಹೋಗುತ್ತಿದ್ದಾಗ ಅವರು ಕೇಳಿದರು.''

''ಎಲ್ಲಿಗೆ?''

''ಪೇಟೆಗೆ''

''ಪೇಟೆಗೆ ವ್ಯಾಪಾರಕ್ಕೆ ಹೋಗುವುದಕ್ಕಿಂತ ಜ್ಞಾನ ಕೂಟಕ್ಕೆ ಹೋಗಬಾರದೇ?''

''ಅಲ್ಲಿಗೂ ಒಮ್ಮೊಮ್ಮೆ ಹೋಗುತ್ತೇನೆ.''

''ಅದು ಸಾಲದು, ಜ್ಞಾನ ಸಭೆಯಲ್ಲಿ ಹೆಚ್ಚು ಗಮನ ಹರಿಸಬೇಕು. ಆ ರಂಗದಲ್ಲಿ ನಿನಗೆ ಉತ್ತಮ ಭವಿಷ್ಯವಿದೆ.''

ಅಬೂ ಹನೀಫಾ ಹೇಳುತ್ತಾರೆ: ''ಆ ಬಳಿಕ ನಾನು ಜ್ಞಾನ ಸಭೆಗಳಲ್ಲಿ ಹೆಚ್ಚು ಸಮಯ ವ್ಯಯಿಸಲು ಶುರು ಮಾಡಿದೆ. ಶಅಬಿಯವರ ಉಪದೇಶದಿಂದ ನಾನು ಅನುಗ್ರಹೀತನಾದೆ.''

★★★★★★

ಅಬೂ ಹನೀಫಾರು 200 ವಿದ್ವಾಂಸರಿಂದ ಜ್ಞಾನ ಸಂಪಾದಿಸಿದ್ದರು. ಅವರು ಹಮ್ಮಾದ್ ಬಿನ್ ಅಬೂ ಸುಲೈಮಾನರ ಶಿಷ್ಯರಾಗಿ ಸುದೀರ್ಘ 18 ವರ್ಷಗಳ ಕಾಲ ವಿದ್ಯೆ ಕಲಿತಿದ್ದರು!

ಇಮಾಮ್ ಅಬೂ ಹನೀಫಾರು 400 ಹದೀಸ್ ವಿದ್ವಾಂಸರಿಂದ ಹದೀಸನ್ನು ಉಲ್ಲೇಖಿಸಿದ್ದಾರೆ.

ಅವರು 25 ಬಾರಿ ಹಜ್ಜ್ ಮಾಡಿದ್ದಾರೆ. ಆ ಯಾತ್ರೆಗಳು ಹಜ್ಜ್‌ಗೆ ಮಾತ್ರ ಸೀಮಿತವಾಗಿರಲಿಲ್ಲ, ಜ್ಞಾನ ಸಂಪಾದನೆಯೂ ಅದರ ಉದ್ದೇಶವಾಗಿತ್ತು.

★★★★★★

ಇಮಾಮ್ ಅಬೂ ಹನೀಫಾರ ಶಿಷ್ಯರಲ್ಲಿ ಓರ್ವರಾದ ಅಬೂ ಯೂಸುಫ್ ತಮ್ಮ ವಿದ್ಯಾಭ್ಯಾಸ ಕಾಲದ ಒಂದು ಅನುಭವವನ್ನು ಹೀಗೆ ವಿವರಿಸಿದ್ದಾರೆ: ''ಹದೀಸ್ ಮತ್ತು ಫಿಕ್ಹ್ ಕಲಿಯುವ ಕಾಲದಲ್ಲಿ ನನ್ನ ಆರ್ಥಿಕ ಸ್ಥಿತಿಯು ತೀರಾ ಹದಗೆಟ್ಟಿತ್ತು. ಬಹಳ ಕಷ್ಟದಿಂದ ಜೀವನ ಸಾಗಿಸುತ್ತಿದ್ದೆ.

ಹೀಗಿರಲು ಒಂದು ದಿನ ತಂದೆಯವರು ಪಾಠ ಶಾಲೆಗೆ ಬಂದು ನನ್ನನ್ನು ಕರೆದು ಹೇಳಿದರು: ''ಮಗಾ, ಅಬೂ ಹನೀಫ ಶ್ರೀಮಂತ. ಆದರೆ ನಿನ್ನ ಸ್ಥಿತಿ ಹಾಗಿಲ್ಲ, ಬದುಕಿಗಾಗಿ ಏನಾದರೂ ಉದ್ಯೋಗ ಮಾಡಬೇಕು. ಇಲ್ಲದಿದ್ದರೆ ನಾವು ಹಸಿವೆಯಿಂದ ಸಾಯಬೇಕಾದೀತು.''

ಆ ಬಳಿಕ ನಾನು ಅಧ್ಯಯನದ ಸಮಯವನ್ನು ಕಡಿಮೆಗೊಳಿಸಿದೆ. ಕೆಲವು ದಿನ ಮದರಸಕ್ಕೆ ಹೋಗದೆ ಕೆಲಸ ಮಾಡಿದೆ.

ನನ್ನ ಗೈರು ಹಾಜರಿಯನ್ನು ನೋಡಿ ಇಮಾಮ್ ವಿಚಾರಿಸಿದರು. ಅನಂತರ ನಾನು ಮದರಸಕ್ಕೆ ಹೋದಾಗ ಗೈರು ಹಾಜರಿಯ ಬಗ್ಗೆ ಕೇಳಿದರು.

''ತಂದೆಯವರು ಹೇಳಿದಂತೆ ಕೆಲಸಕ್ಕೆ ಹೋದೆ.''

ಅಂದು ಮದರಸ ಮುಗಿದು ಎಲ್ಲರೂ ಹೋದ ಬಳಿಕ ಇಮಾಮರು ನನಗೆ ಒಂದು ಹಣದ ಚೀಲವನ್ನು ಕೊಟ್ಟರು. ಇದೋ, ನೂರು ದಿರ್ಹಮ್. ಇದನ್ನು ತೆಗೆದುಕೊಂಡು ಹೋಗು. ಇದು ಮುಗಿದಾಗ ಬಂದು ಹೇಳಬೇಕು. ಮದರಸಕ್ಕೆ ತಪ್ಪಿಸಬೇಡ.''

ಅನಂತರ ನಾನು ದಿನನಿತ್ಯ ಮದರಸಕ್ಕೆ ಹೋದೆ. ಸ್ವಲ್ಪ ದಿನ ಕಳೆದಾಗ ಇಮಾಮರು ಪುನಃ ನೂರು ದಿರ್ಹಮ್ ಕೊಟ್ಟರು. ತರುವಾಯ ಇದು ರೂಢಿಯಾಯಿತು. ಕೊಟ್ಟ ಹಣ ಮುಗಿದಿದೆಯೇ ಎಂದು ಅವರು ಕೇಳುತ್ತಿರಲಿಲ್ಲ, ಮುಗಿದರೂ ನಾನು ಹೇಳುತ್ತಿರಲಿಲ್ಲ.

ಹೀಗೆ ನನ್ನ ಬಡತನ ತೊಲಗಿತು. ಸಂಕಷ್ಟ ನಿವಾರಣೆಯಾಯಿತು. ನೆಮ್ಮದಿಯಿಂದ ಶಿಕ್ಷಣ ಪಡೆಯಲು ಸಾಧ್ಯವಾಯಿತು. ಅವರ ಆಶ್ರಯದಲ್ಲಿ 29 ವರ್ಷ ಕಲಿತೆ. (ಇನ್ನೊಂದು ವರದಿಯಂತೆ 17 ವರ್ಷ) ಆ ಸದ್ಭಾವನೆ ಮತ್ತು ನೆರವಿನಿಂದ ನನಗೆ ವಿದ್ಯೆ ದೊರೆಯಿತು. ಹಣವೂ ದೊರೆಯಿತು.

★★★★★★

ಇಮಾಮ್ ಅಬೂ ಹನೀಫಾರು ಕುರ್‌ಆನ್ ಓದುವಾಗ ಅರ್ಥಗ್ರಹಿಸಿ ಅಳುತ್ತಿದ್ದರು. ರಾತ್ರಿ ಆ ಅಳು ನೆರೆಕರೆಯವರಿಗೆ ಕೇಳುತ್ತಿತ್ತು. ಅವರಿಗೆ ಅವರ ಮೇಲೆ ಕನಿಕರವಾಗುತ್ತಿತ್ತು.

★★★★★★

ಓರ್ವರು ಇಮಾಮ್ ಅಬೂ ಹನೀಫಾರಿಗೆ ಉಪದೇಶಿಸಿದರು. ''ನೀವು ಎಚ್ಚರವಹಿಸಬೇಕು. ಅಲ್ಲಾಹನಿಗೆ ಹೆದರಬೇಕು.''

ಇದನ್ನು ಕೇಳಿ ಅಬೂ ಹನೀಫಾರ ಮನಸ್ಸು ತಲ್ಲಣಿಸಿತು. ಇಡೀ ದೇಹವು ಬೆವರಿನಿಂದ ಒದ್ದೆಯಾಗಿ ಅವರು ಗಡಗಡನೆ ನಡುಗಿದರು. ''ಮಿತ್ರನೇ, ನಿನಗೆ ಕೃತಜ್ಞತೆ. ಅಲ್ಲಾಹನು ನಿನಗೆ ಅನುಗ್ರಹ ನೀಡಲಿ. ಹೀಗೆಯೇ ಎಲ್ಲ ಕಾಲಗಳಲ್ಲಿಯೂ ಉಪದೇಶ ನೀಡುವ ಜನರ ಅಗತ್ಯವಿದೆ.''

★★★★★★

ಒಮ್ಮೆ ಓರ್ವರು ಅಬೂ ಹನೀಫಾರನ್ನು ಬೈದರು. ಕಾಫಿರ್ ಎಂದು ದೂಷಿಸಿದರು. ಆದರೆ ಇಮಾಮ್ ಕೋಪಿಸಲಿಲ್ಲ, ಬದಲಾಗಿ ಹೀಗೆಂದರು: ''ನಿನ್ನನ್ನು ಅಲ್ಲಾಹ್ ಕ್ಷಮಿಸಲಿ. ಆತನಿಗೆ ತಿಳಿದಿದೆ ನಾನು, ನೀನು ಹೇಳುತ್ತಿರುವಂಥ ವ್ಯಕ್ತಿಯಾಗಿಲ್ಲವೆಂದು.''

★★★★★★

ಇಮಾಮ್ ಅಬೂ ಹನೀಫಾರು ಶಿಕ್ಷಣದ ಪ್ರಚಾರಕ್ಕಾಗಿ 800 ಶಿಷ್ಯರನ್ನು ಜಗತ್ತಿನ ವಿವಿಧೆಡೆಗಳಿಗೆ ಕಳುಹಿಸಿದರು.

ತಮ್ಮ ಶಿಷ್ಯರ ಯೋಗ್ಯತೆಯ ಬಗ್ಗೆ ಅವರು ಹೀಗೆನ್ನುತ್ತಿದ್ದರು: ಮುಜ್ತಹಿದ್ (ಸಂಶೋಧಕರು)ಗಳಾದ 36 ಮಂದಿಯಿದ್ದಾರೆ. ಆ ಪೈಕಿ ಈರ್ವರಿಗೆ ಮುಫ್ತಿ (ಧರ್ಮವಿಧಿ ನೀಡುವವ) ಮತ್ತು ಕಾಝೀ(ನ್ಯಾಯಾಧೀಶ)ಗಳಾಗಿ ಶಿಕ್ಷಣ ನೀಡುವ ಸಾಮರ್ಥ್ಯವಿದೆ. 286 ಮಂದಿಗೆ ಕಾಝಿಗಳಾಗುವ ಯೋಗ್ಯತೆಯಿದೆ.

★★★★★★

ಇಮಾಮ್ ಅಬೂ ಹನೀಫಾರ ಕಾನೂನು ನಿರ್ಣಯದ ವಿಧಾನದ ಕುರಿತು ಅಲ್ ಮುವಫ್ಫಕ್ ಬಿನ್ ಅಹ್ಮದ್ ಮಕ್ಕಿ(ಹಿ.568/ ಕ್ರಿ.ಶ. 1172) ಹೀಗೆ ಬರೆದಿದ್ದಾರೆ: ''ಅಬೂ ಹನೀಫಾರು ತಮ್ಮ ಮದ್ಹಬನ್ನು ಪ್ರತಿಭಾವಂತ ಶಿಷ್ಯರೊಂದಿಗೆ ಸಮಾಲೋಚಿಸಿ ಕ್ರೋಢೀಕರಿಸಿದ್ದರು. ಧರ್ಮಕ್ಕಾಗಿ ತೀವ್ರ ಶ್ರಮ ವಹಿಸುವ ಭಾವನೆಯು ಅವರಲ್ಲಿ ಸ್ಫುರಿಸುತ್ತಿತ್ತು. ಅವರ ಮನಸ್ಸು ತಕ್ವಾ ಮತ್ತು ಪ್ರವಾದಿಯ ಮೇಲಿನ ಪ್ರೀತಿ ವಿಶ್ವಾಸಗಳಿಂದ ತುಂಬಿ ತುಳುಕುತ್ತಿತ್ತು. ಆದ್ದರಿಂದ ಶಿಷ್ಯರನ್ನು ದೂರವಿರಿಸಿ ಅವರು ಒಂಟಿಯಾಗಿ ಈ ಘನ ಕಾರ್ಯವನ್ನು ನಿರ್ವಹಿಸುವುದನ್ನು ಮೆಚ್ಚಲಿಲ್ಲ. ಅವರು ಪ್ರತಿಯೊಂದು ಸಮಸ್ಯೆಯನ್ನು ಪ್ರಥಮವಾಗಿ ಶಿಷ್ಯರ ಮುಂದಿಡುತ್ತಿದ್ದರು. ಅದರ ವಿವಿಧ ಅಂಶಗಳನ್ನು ಅವರಿಗೆ ವಿವರಿಸುತ್ತಿದ್ದರು. ಅವರ ಅಭಿಪ್ರಾಯ ಮತ್ತು ದೃಷ್ಟಿ ಕೋನಗಳನ್ನು ಗಮನಿಸುತ್ತಿದ್ದರು. ಕೆಲವೊಮ್ಮೆ ಒಂದು ಸಮಸ್ಯೆಯ ಕುರಿತು ತಿಂಗಳು ಗಟ್ಟಲೆ ಚರ್ಚೆ ಸಾಗುತ್ತಿತ್ತು. ಕೊನೆಗೆ ಯಾವುದಾದರೂ ಅಭಿಪ್ರಾಯವು ಅಂಗೀಕೃತವಾದರೆ ಕಾಝೀ ಅಬೂ ಯೂಸುಫ್ ಅದನ್ನು ಗ್ರಂಥದಲ್ಲಿ ದಾಖಲಿಸುತ್ತಿದ್ದರು.''

ಇಮಾಮ್ ಅಬೂ ಹನೀಫಾರು ಶರೀಅತ್ ಕಾನೂನುಗಳನ್ನು ಕ್ರೋಢೀಕರಿಸಿದ ಮೊದಲ ವ್ಯಕ್ತಿಯೆಂದು ಮಕ್ಕೀ ದಾಖಲಿಸಿದ್ದಾರೆ.

★★★★★★

ಇಮಾಮ್ ಅಬೂ ಹನೀಫಾರು ಇಸ್ಲಾಮಿನ ದ್ವಿತೀಯ ಮೂಲಾಧಾರವಾಗಿರುವ ಹದೀಸ್‌ಗಿಂತ ಕಿಯಾಸ್‌ಗೆ(ಸ್ವಂತ ಅಭಿಪ್ರಾಯ) ಆದ್ಯತೆ ನೀಡುತ್ತಿರುವವರೆಂಬ ಟೀಕೆ ಕೇಳಿಬಂತು.

ಆ ಕುರಿತು ಖಲೀಫ ಮನ್ಸೂರ್ ವಿಚಾರಿಸಿದಾಗ ಅಬೂ ಹನೀಫಾ ಹೇಳಿದರು: ''ಅಮೀರುಲ್ ಮೂಮಿನೀನ್, ನೀವು ಕೇಳಿದ ಸುದ್ದಿಯು ಸರಿಯಲ್ಲ, ನಾನು ಪವಿತ್ರ ಕುರ್‌ಆನಿಗೆ ಆದ್ಯ ಗಮನ ನೀಡುತ್ತೇನೆ. ಅನಂತರ ಪ್ರವಾದಿಚರ್ಯೆಗೆ. ಆ ಬಳಿಕ ಅಬೂಬಕರ್, ಉಮರ್, ಉಸ್ಮಾನ್ ಮತ್ತು ಅಲಿ(ರ) ಎಂಬೀ ಖಲೀಫಾರ ತೀರ್ಪುಗಳಿಗೆ. ಆ ಬಳಿಕ ಇತರ ಸಹಾಬಿಗಳ ನಿರ್ಣಯಗಳಿಗೆ. ಅವರ ತೀರ್ಮಾನಗಳಲ್ಲಿ ಭಿನ್ನಮತವಿದ್ದರೆ ಮಾತ್ರ ನಾನು ಕಿಯಾಸನ್ನು ಅವಲಂಬಿಸುತ್ತೇನೆ.''

★★★★★★

ಇರಾಕಿನ ಉಮವಿ ರಾಜ್ಯಪಾಲರಾದ ಯಝೀದ್ ಬಿನ್ ಉಮರ್ ಬಿನ್ ಹುಬೈರಾರು ಪ್ರಥಮವಾಗಿ ಇಮಾಮ್ ಅಬೂ ಹನೀಫಾರೊಡನೆ ಕಾಝೀ ಹುದ್ದೆಯನ್ನು ಸ್ವೀಕರಿಸುವಂತೆ ವಿನಂತಿಸಿದ್ದರು. ಆಗ ಹಿ.130(ಕ್ರಿ.ಶ.747) ಉಮವಿ ಆಡಳಿತದ ವಿರುದ್ಧ ಇರಾಕ್‌ನಲ್ಲಿ ದಂಗೆ ಆರಂಭವಾಗಿತ್ತು. ಇಮಾಮರನ್ನು ತಮ್ಮ ರಾಜಕೀಯ ಹಿತಾಸಕ್ತಿಗಳಿಗಾಗಿ ಬಳಸುವುದೇ ಇಬ್ನು ಹುಬೈರಾರ ಉದ್ದೇಶವಾಗಿತ್ತು. ಇತರ ಕೆಲವು ವಿದ್ವಾಂಸರಿಗೂ ಉನ್ನತ ಸ್ಥಾನಗಳನ್ನು ನೀಡಿದ ಬಳಿಕ ಇಬ್ನು ಹುಬೈರಾ, ಅಬೂ ಹನೀಫಾರೊಡನೆ ಹೇಳಿದರು: ''ನಾನು ನನ್ನ ಮೊಹರನ್ನು ನಿಮಗೆ ಒಪ್ಪಿಸುತ್ತೇನೆ. ನೀವು ಮೊಹರು ಹಾಕದೆ ದೇಶದಲ್ಲಿ ಯಾವ ಕಾನೂನನ್ನೂ ಜಾರಿಗೊಳಿಸುವುದಿಲ್ಲ. ನಿಮ ಒಪ್ಪಿಗೆಯಿಲ್ಲದೆ ಖಜಾನೆಯಿಂದ ಒಂದು ಚಿಕ್ಕಾಸನ್ನೂ ಹೊರತೆಗೆಯುವುದಿಲ್ಲ.''

ಈ ವಿನಂತಿಯನ್ನು ತಿರಸ್ಕರಿಸಿದ್ದಕ್ಕಾಗಿ ಇಬ್ನು ಹುಬೈರಾ, ಅಬೂ ಹನೀಫಾರನ್ನು ಜೈಲಿಗೆ ಹಾಕಿದರು.

ಇತರ ವಿದ್ವಾಂಸರು ಅಬೂ ಹನೀಫಾರಿಗೆ ಬುದ್ಧಿ ಹೇಳಿದರು:''ನಿರ್ಬಂಧಿತ ರಾಗಿರುವುದರಿಂದ ನಾವು ಹುದ್ದೆಯನ್ನು ವಹಿಸಿಕೊಂಡಿದ್ದೇವೆ ಆದ್ದರಿಂದ ನೀವು ಕೂಡಾ ಹುದ್ದೆ ವಹಿಸಿಕೊಳ್ಳಿರಿ.''

ಅದಕ್ಕೆ ಅಬೂ ಹನೀಫಾ ಹೀಗೆ ಉತ್ತರಿಸಿದರು: ''ಅವರಿಗಾಗಿ ವಾಸ್ವಿತ್‌ನ ಮಸೀದಿಯ ಬಾಗಿಲುಗಳನ್ನು ಎಣಿಸಬೇಕೆಂದು ಆಜ್ಞಾಪಿಸಿದರೂ ನಾನು ಆ ಕೆಲಸವನ್ನು ಸ್ವೀಕರಿಸಲಾರೆ. ಯಾರನ್ನಾದರೂ ವಧಿಸುವಂತೆ ಆದೇಶಿಸಿ ಅದಕ್ಕೆ ಸಹಿ ಹಾಕಲು ಅವರು ಬಯಸುತ್ತಿದ್ದಾರೆ. ಅಲ್ಲಾಹನಾಣೆ, ಅಂತಹ ಉದ್ಯೋಗವನ್ನು ನಾನು ಸ್ವೀಕರಿಸಲಾರೆ.''

ಇತರ ಕೆಲವು ಹುದ್ದೆಗಳನ್ನೂ ಅಬೂ ಹನೀಫಾರಿಗೆ ವಾಗ್ದಾನ ಮಾಡಲಾಯಿತು. ಅವರು ಯಾವುದನ್ನೂ ಸ್ವೀಕರಿಸಲಿಲ್ಲ, ಕೊನೆಗೆ ಇಬ್ನು ಹುಬೈರಾ, ಅಬೂ ಹನೀಫಾರು ಕೂಫಾದ ಕಾಝಿ ಸ್ಥಾನವನ್ನು ಅಂಗೀಕರಿಸಬೇಕು ಅನ್ಯಥಾ ಛಡಿಯೇಟು ನೀಡುವೆನೆಂದು ಶಪಥ ಹಾಕಿದರು. ನನ್ನನ್ನು ಕೊಂದರೂ ಆ ಹುದ್ದೆಯನ್ನು ಸ್ವೀಕರಿಸುವುದಿಲ್ಲವೆಂದು ಅಬೂ ಹನೀಫಾ

ಖಡಾಖಂಡಿತವಾಗಿ ಸಾರಿದರು. ಆದರಂತೆ ಅವರನ್ನು ಜೈಲಿಗೆ ಹಾಕಿ ದಿನನಿತ್ಯ ಹತ್ತು ಛಡಿಯೇಟುಗಳಂತೆ ಹಲವು ದಿನ ದಂಡಿಸಲಾಯಿತು. ತರುವಾಯ ಸಾಯಬಹುದೆಂಬ ಭೀತಿಯಿಂದ ಅವರನ್ನು ಬಿಟ್ಟು ಬಿಟ್ಟರು. ವಿಮೋಚಿತರಾದ ಅಬೂ ಹನೀಫಾರು ಉಮವಿ ಆಡಳಿತ ಕೊನೆಗೊಳ್ಳುವ ತನಕ ಮಕ್ಕಾದಲ್ಲಿಯೇ ವಾಸಿಸಿದರು.

★★★★★★

ಅಬ್ಬಾಸಿಯರ ಆಡಳಿತ ಕಾಲದಲ್ಲಿಯೂ ಅಬೂ ಹನೀಫಾರಿಗೆ ಇಂಥ ಕಷ್ಟವುಂಟಾಯಿತು. ಖಲೀಫ ಮನ್ಸೂರರು ಅಬೂ ಹನೀಫಾರೊಡನೆ ಕಾಝಿ ಸ್ಥಾನವನ್ನು ವಹಿಸುವಂತೆ ಒತ್ತಾಯಿಸಿದರು. ಅದಕ್ಕೆ ಅಬೂ ಹನೀಫ ಹೀಗೆ ಉತ್ತರಿಸಿದರು: ''ನಿಮ್ಮ ಮತ್ತು ನಿಮ್ಮ ಮಕ್ಕಳ ಹಾಗೂ ಅಧಿಕಾರಿಗಳ ಮೇಲೆ ಕಾನೂನು ಜಾರಿಗೊಳಿಸಬಲ್ಲಂಥ ವ್ಯಕ್ತಿಗೆ ಮಾತ್ರ ಕಾಝಿಯಾಗಲು ಸಾಧ್ಯ, ನಾನು ಅದಕ್ಕೆ ಅರ್ಹನಲ್ಲ.''

ಮತ್ತೊಮ್ಮೆ ಅಬೂ ಹನೀಫಾ ಮನ್ಸೂರರೊಡನೆ ಹೇಳಿದರು: ''ಅಲ್ಲಾಹನಾಣೆ! ನಾನು ತೃಪ್ತಿಯಿಂದ ಈ ಸ್ಥಾನವನ್ನು ಸ್ವೀಕರಿಸಿದರೆ ನಿಮಗೆ ನನ್ನಲ್ಲಿ ಭರವಸೆಯಿರಿಸಲು ಸಾಧ್ಯವಿಲ್ಲ. ಇನ್ನು ಒಂದು ವೇಳೆ ನಾನು ಅದನ್ನು ಅತೃಪ್ತಿಯಿಂದ ಅಥವಾ ನಿರ್ಬಂಧಿತನಾಗಿ ಸ್ವೀಕರಿಸಿದರೆ, ತರುವಾಯ ಯಾವುದಾದರೂ ವಿವಾದದಲ್ಲಿ ನನ್ನ ತೀರ್ಪು ನಿಮ್ಮ ಹಿತಾಸಕ್ತಿಗಳಿಗೆ ವಿರುದ್ಧವಾದರೆ ನೀವು ನನ್ನನ್ನು ಹೀಗೆ ಬೆದರಿಸಬಹುದು, ''ನೀನು ತೀರ್ಪನ್ನು ಬದಲಾಯಿಸದಿದ್ದರೆ ನಾನು ನಿನ್ನನ್ನು 'ಯೂಪ್ರಟಿಸ್'ನಲ್ಲಿ ಮುಳುಗಿಸಿ ಕೊಲ್ಲುವೆ. ಆ ಸಂದರ್ಭದಲ್ಲಿನಾನು ನನ್ನ ತೀರ್ಪನ್ನು ಬದಲಾಯಿಸುವ ಬದಲು ಮುಳುಗಿ ಸಾಯುವುದನ್ನೇ ಮೆಚ್ಚುತ್ತೇನೆ.''

''ಹಾಗೆಯೇ ನಿಮ ದರ್ಬಾರಿನಲ್ಲಿ ಅನೇಕ ಸೇವಕರು ಮತ್ತು ಪರಿಚಾರಕರಿದ್ದಾರೆ. ನಿಮ್ಮಂತೆಯೇ ಅವರಿಗೂ ವಿನಾಯಿತಿ ನೀಡುವ ಕಾಝಿಗಳನ್ನು ಅವರು ಬಯಸಬಹುದು.''

ಮನ್ಸೂರ್ ಬಿಡಲಿಲ್ಲ. ಕಾಝಿ ಸ್ಥಾನವನ್ನು ವಹಿಸುವಂತೆ ಅಬೂ ಹನೀಫಾರನ್ನು ಪುನಃ ಒತ್ತಾಯಿಸುತ್ತಿದ್ದರು. ಇಮಾಮರು ತಮ್ಮ ನಿರ್ಣಯದಲ್ಲಿ ಅಚಲರಾಗಿದ್ದರು. ಮನ್ಸೂರ್ ಕೇಳಿದರು, ''ನೀವೇನು ನನ್ನನ್ನು ಧಿಕ್ಕರಿಸುತ್ತೀರಾ?''

''ಇಲ್ಲ, ಕಾಝಿಯಾಗಲು ನಾನು ಅನರ್ಹನಾಗಿದ್ದೇನೆ.''

''ಸುಳ್ಳು ಹೇಳಬಾರದು.''

''ಕಾಝಿಯಾಗಲು ನಾನು ಅಯೋಗ್ಯನೆಂದು ಈಗ ನೀವೇ ತೀರ್ಪು ನೀಡಿದಿರಿ. ಸುಳ್ಳು ಹೇಳುವಾತನು ಕಾಝಿ ಸ್ಥಾನಕ್ಕೆ ಯೋಗ್ಯನಲ್ಲ. ಅಥವಾ ನಾನು ಸತ್ಯವಂತನೆಂದು ನೀವು ಭಾವಿಸುವುದಿದ್ದರೂ ನಾನು ಕಾಝೀ ಸ್ಥಾನಕ್ಕೆ ಅರ್ಹನಾಗುವುದಿಲ್ಲ. ಏಕೆಂದರೆ, ಸ್ವಲ್ಪ ಮುಂಚೆ

ನಾನು ಕಾಝೀ ಸ್ಥಾನಕ್ಕೆ ಅರ್ಹನಲ್ಲವೆಂದು ಹೇಳಿದ್ದೇನೆ. ಸತ್ಯವಂತನಾದ ನನ್ನ ಮಾತನ್ನು ನಂಬಬೇಕಲ್ಲವೇ?''

ಇಮಾಮ್ ಯಾವ ರೀತಿಯಿಂದಲೂ ಒಪ್ಪುವುದಿಲ್ಲವೆಂದು ಖಚಿತವಾದಾಗ ಮನ್ಸೂರ್ ಅವರನ್ನು ಜೈಲಿಗೆ ಹಾಕಿದರು. ಮಾತ್ರವಲ್ಲ ಮನಸ್ವೇಚ್ಛೆ ಥಳಿಸಿದರು. ನೀರು ಕೂಡಾ ಕೊಡದೆ ಪೀಡಿಸಿದರು. ಹೀಗೆ ಜೈಲಿನಲ್ಲಿಯೇ ಅವರು ಮರಣ ಹೊಂದಿದರು.

ಮನ್ಸೂರರ ಪ್ರತಿಸ್ಪರ್ಧಿಯಾಗಿದ್ದ ಇಬ್ರಾಹೀಮ್‌ರನ್ನು ಬೆಂಬಲಿಸಿದ್ದರಿಂದ, ಇಮಾಮರನ್ನು ಮನ್ಸೂರ್ ವಿಷಕೊಟ್ಟು ಕೊಂದದ್ದೆಂಬ ಅಭಿಪ್ರಾಯವೂ ಇದೆ.

★★★★★★

ಅಬೂ ಹನೀಫಾರ ಕಿರಿಯ ಪುತ್ರ ಇಸ್ಮಾಈಲ್ ಒಂದು ಘಟನೆಯನ್ನು ವಿವರಿಸುತ್ತಾರೆ: ನಾನು ನನ್ನ ತಂದೆಯ ಜತೆಯಲ್ಲಿ ಕೂಫಾದ ಕುವಾಸಾದ ಮೂಲಕ ನಡೆದು ಹೋಗುತ್ತಿದ್ದೆ. ಪಕ್ಕನೆ ತಂದೆಯವರು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದರು.

''ಏನಾಯಿತು?'' ನಾನು ಬೆರಗಿನಿಂದ ಪ್ರಶ್ನಿಸಿದೆ.

''ಮಗನೇ, ಈ ಸ್ಥಳದಲ್ಲಿ ಇಬ್ನು ಹುಬೈರಾ ನನ್ನ ತಂದೆಗೆ ಹೊಡೆದಿದ್ದರು. ನಿರಂತರ ಹತ್ತು ದಿನ, ಪ್ರತಿ ದಿನ ಹತ್ತು ಏಟು. ನ್ಯಾಯಾಧೀಶ ಸ್ಥಾನವನ್ನು ವಹಿಸದ್ದಕ್ಕಾಗಿ ಆ ಶಿಕ್ಷೆ ನೀಡಲಾಗಿತ್ತು.''

★★★★★★

ಇಮಾಮ್ ಅಬೂ ಹನೀಫಾರು 7000 ಬಾರಿ ಕುರ್‌ಆನ್ ಸಂಪೂರ್ಣವಾಗಿ ಓದಿ ಮುಗಿಸಿದ್ದ(ಖತಮ್) ಸ್ಥಳದಲ್ಲಿ ಮೃತರಾದರು.

ಬಗ್ದಾದ್‌ನಲ್ಲಿ ಇಮಾಮ್ ಅಬೂ ಹನೀಫಾರ ಜನಾಝಾ ನಮಾಝ್‌ನಲ್ಲಿ ಎಷ್ಟು ಮಂದಿ ಭಾಗವಹಿಸಿರುವರೆಂದು ತಿಳಿದಿದೆಯೇ? 50,000 ಮಂದಿ. 6 ಬಾರಿ ಜನಾಝಾ ನಮಾಝ್ ನಿರ್ವಹಿಸಲಾಗಿತ್ತು.

★★★★★★

ಇಮಾಮ್ ಅಬೂ ಹನೀಫಾ ಹೇಳಿದ್ದಾರೆ:

''ಒಂದು ವಿಷಯವು ಹದೀಸ್ ಎಂದು ವ್ಯಕ್ತವಾದರೆ ನಾವು ಅದನ್ನು ಮನಃಪೂರ್ವಕ ಸ್ವೀಕರಿಸುವೆವು. ಮುಂದಿನ ಸ್ಥಾನ ಸಹಾಬಿಗಳ ಅಭಿಪ್ರಾಯಗಳಿಗೆ. ಅವುಗಳಲ್ಲಿ ಹೆಚ್ಚು ಉತ್ತಮವಾದುದನ್ನು ನಾವು ಸ್ವೀಕರಿಸುತ್ತೇವೆ. ಅನಂತರ ಇತರರ ಅಭಿಪ್ರಾಯಗಳು. ಅವರು ಕೇವಲ ನಮ್ಮಂತಹ ಜನರಾಗಿದ್ದಾರೆ.''

''ನಾನು ಹೇಳುವುದು ನನ್ನ ಅಭಿಪ್ರಾಯ. ಗರಿಷ್ಠ ಸಂಶೋಧನೆ ನಡೆಸಿ ಕಂಡು ಹಿಡಿದ ಅಭಿಪ್ರಾಯ. ನನಗಿಂತ ಪ್ರಬಲ ಸಾಕ್ಷ್ಯವನ್ನು ಬೇರೆ ಯಾರಾದರೂ ತೋರಿಸಿದರೆ ನನ್ನ ಅಭಿಪ್ರಾಯವನ್ನು ತಿರಸ್ಕರಿಸಿ ಅವರ ಅಭಿಪ್ರಾಯವನ್ನು ಸ್ವೀಕರಿಸಲು ಸಿದ್ಧನಿದ್ದೇನೆ.''

''ನ್ಯಾಯಾಧೀಶನು ಲಂಚ ಪಡೆದರೆ ಆತ ನ್ಯಾಯಾಧೀಶನಾಗಿದ್ದರೂ ಆ ಸ್ಥಾನದಿಂದ ಹೊರ ಹೋಗುತ್ತಾನೆ.''

''ಒಳಿತು ಮಾಡಲು ಮತ್ತು ಕೆಡುಕನ್ನು ತೊರೆಯಲು ಪ್ರಥಮ ಹಂತದಲ್ಲಿ ನಾಲಗೆಯಿಂದ ಆದೇಶಿಸಬೇಕು. ಆದರೂ ಸರಿದಾರಿಗೆ ಬಾರದಿದ್ದರೆ ಬಲಪ್ರಯೋಗಿಸಿ ರಂಗಕ್ಕಿಳಿಯಬೇಕು. ಇದು ಕಡ್ಡಾಯ.''

''ಆಡಳಿತಗಾರನು ಸಾರ್ವಜನಿಕ ಬೊಕ್ಕಸವನ್ನು ದುರುಪಯೋಗಿಸಿದರೆ ಆತನ ನಾಯಕತ್ವವು ಅಸಿಂಧುವಾಗುತ್ತದೆ, ಆಡಳಿತವು ಅಸಮ್ಮತಾರ್ಹವಾಗುತ್ತದೆ.''

''ಮಾನವ ಹಕ್ಕುಗಳನ್ನು ಉಲ್ಲಂಘಿಸುವ ರೀತಿಯಲ್ಲಿ ಖಲೀಫಾ ವರ್ತಿಸಿದರೆ, ಸ್ಥಾನಮಾನದಲ್ಲಿ ಅವರಿಗೆ ಹತ್ತಿರವಾಗಿರುವ ಮುಖ್ಯ ನ್ಯಾಯಾಧೀಶನು ಅವರ ವಿರುದ್ಧ ಕಾನೂನು ಕ್ರಮ ಕೈಗೊಳ್ಳಬೇಕು.''

★★★★★★

ಅಲೀ ಬಿನ್ ಆಸಿಮ್ ಹೇಳುತ್ತಾರೆ. ''ಅಬೂ ಹನೀಫಾರ ಜ್ಞಾನವನ್ನು ತಕ್ಕಡಿಯ ಒಂದು ಬಟ್ಟಲಿನಲ್ಲಿಯೂ ಅವರ ಸಮಕಾಲೀನರ ಜ್ಞಾನವನ್ನು ತಕ್ಕಡಿಯ ಇನ್ನೊಂದು ಬಟ್ಟಲಿನಲ್ಲಿಯೂ ತೂಗಿದರೆ ಅಬೂ ಹನೀಫಾರ ಬಟ್ಟಲು ಭಾರವಾಗಬಹುದು.''

ಇಮಾಮ್ ಶಾಫಿಈ ಹೇಳುತ್ತಾರೆ: ''ರಘುಬೂರ್‌ನ ವಚನಗಳಂಥ ಉನ್ನತ ಕಾನೂನುಗಳನ್ನೂ, ಕರ್ಮಶಾಸ್ತ್ರ ತತ್ವಗಳನ್ನೂ, ಪಾಂಡಿತ್ಯಗಳನ್ನೂ ನೀಡಿ ಇಮಾಮ್ ಅಬೂ ಹನೀಫಾ ಜಗತ್ತನ್ನೂ ಜನತೆಯನ್ನೂ ಅನುಗ್ರಹಿಸಿದ್ದಾರೆ. ಅವರಿಗೆ ಸಮಾನರಾಗಿ ಯಾರೂ ಇಲ್ಲ, ಉತ್ತರದಲ್ಲಿಯೂ ಇಲ್ಲ, ದಕ್ಷಿಣದಲ್ಲಿಯೂ ಇಲ್ಲ, ಕೂಫಾದಲ್ಲಿಯೂ ಇಲ್ಲ, ಅವರ ಪಾಂಡಿತ್ಯವು ಎಲ್ಲರಿಗೂ ಉಪಯುಕ್ತವಾಗಲಿ. ಅಲ್ಲಾಹನು ಅವರನ್ನು ಅನುಗ್ರಹಿಸಲಿ.''

ಕರ್ಮಶಾಸ್ತ್ರದಲ್ಲಿ ಅಬೂ ಹನೀಫಾರು ಇತರೆಲ್ಲರಿಗಿಂತ ಮುಂದಿದ್ದರು. ಎಲ್ಲರೂ ಅವರನ್ನು ಅವಲಂಬಿಸಬೇಕಾಗಿತ್ತು.

ಇಮಾಮ್ ಮಾಲಿಕ್‌ರೊಡನೆ ಒಬ್ಬರು ಕೇಳಿದರು: ''ನೀವು ಅಬೂ ಹನೀಫಾರನ್ನು ನೋಡಿದ್ದೀರಾ?''

''ನೋಡಿದ್ದೇನೆ, ಈ ಮರದ ಕಂಬವು ಚಿನ್ನದ್ದೆಂದು ವಾದಿಸಿದರೆ ಅದನ್ನು ಸಾಬೀತು ಪಡಿಸುವ ಸಾಮರ್ಥ್ಯ ಅವರಿಗಿತ್ತು.''



# ಇಮಾಮ್ ಮಾಲಿಕ್ (ರ)

## (ಹಿಜರಿ. 93-179/ಕ್ರಿ.ಶ. 712-795)

ಮಾಲಿಕೀ ಮದ್ಹಬ್‌ನ ಜನಕ. ಪ್ರಮುಖ ಧಾರ್ಮಿಕ ಕಾನೂನು ತಜ್ಞ. ಹದೀಸ್ ಮತ್ತು ಕರ್ಮಶಾಸ್ತ್ರದ ಮಹಾ ವಿದ್ವಾಂಸ. ಇವರನ್ನು ಮದೀನಾದ ಇಮಾಮ್ ಎಂದೂ ಕರೆಯಲಾಗುತ್ತದೆ. ಅವರಿಗೆ ಅಬೂ ಅಬ್ದುಲ್ಲಾ ಎಂಬ ಹೆಸರೂ ಇದೆ. ಮದೀನಾದಲ್ಲಿ ಹುಟ್ಟಿದರು. ತಂದೆ ಮಾಲಿಕ್. ಪುತ್ರ ಅನಸ್. ಹಳೆಯ ಪೀಳಿಗೆಯು ಹಿಮ್ಯರನ ಒಂದು ರಾಜ ಕುಟುಂಬಕ್ಕೆ ತಲುಪುತ್ತದೆ. ಅನೇಕ ತಾಬಿಈಗಳಿಂದ ಶಿಕ್ಷಣ ಪಡೆದಿದ್ದರು. ಸಹಾಬಿವರ್ಯರಾದ ಸಹಲ್ ಬಿನ್ ಸಅದ್ ಮೊದಲ ಗುರು. ಫಿಕ್ಹ್(ಕರ್ಮಶಾಸ್ತ್ರ) ಶಾಸ್ತ್ರವನ್ನು ರಬೀಅ್ ಬಿನ್ ಫಾರೂಕರಿಂದ ಕಲಿತಿದ್ದಾರೆ. ಇಮಾಮ್ ಝುಹ್ರಿಯವರೂ ಗುರುಗಳಲ್ಲಿ ಸೇರಿದ್ದಾರೆ.

ಪ್ರಧಾನ ಕೃತಿಗಳು: 'ಮುವತ್ತಾ' (ಇದರಲ್ಲಿ ಹದೀಸ್‌ಗಳ ಹೊರತು ಸಹಾಬಿಗಳ ಫಿಕ್ಹ್ ಕೂಡಾ ಸೇರಿದೆ) 'ಅರ್‌ರದ್ದು ಅಲಲ್ ಕದ್ರಿಯ್ಯಾ', 'ಅರ್‌ರಿಸಾಲತು ಇಲರ್‌ರಶೀದ್', 'ಅಲ್ ಮುದವ್ವನತುಲ್ ಕುಬ್ರಾ'.

ಹಿ.ಶ. 145ರಲ್ಲಿ ಇಮಾಮ್ ಮುಹಮದ್ ಬಿನ್ ಅಬ್ದುಲ್ಲಾರ ನಾಯಕತ್ವದಲ್ಲಿ ನಡೆದ ದಂಗೆಯಿಂದ ಮಾಲಿಕ್ ಗಮನಾರ್ಹರಾದರು. ಇಮಾಮ್ ಅಲಿಯವರ ಹಿಂಗಾಮಿಗಳಾಗಿದ್ದ ಮುಹಮ್ಮದ್ ಮತ್ತು ಇಬ್ರಾಹೀಮ್‌ರನ್ನು ಹಿಡಿದು ತರುವಂತೆ ಖಲೀಫ ಮನ್ಸೂರ್ ಇಮಾಮ್ ಮಾಲಿಕರಿಗೆ ಆಜ್ಞಾಪಿಸಿದರು. ಅವರ ತಂದೆ ಅಬ್ದುಲ್ಲಾರನ್ನು, ಮನ್ಸೂರರ ಭಟರು ಮೊದಲೇ ಬಂಧಿಸಿದ್ದರು. ಆದರೆ ಇಮಾಮ್ ಮಾಲಿಕರು ಆ ನ್ಯಾಯಬಾಹಿರ ಆಜ್ಞೆಯನ್ನು ತಿರಸ್ಕರಿಸಿದರು. ಹಿ. 145ರಲ್ಲಿ ಮುಹಮ್ಮದರ ಆಶ್ರಯದಲ್ಲಿ ಮದೀನಾದಲ್ಲಿ ಗಲಭೆ ಸ್ಫೋಟಿಸಿ ಕೊನೆಗೆ ಮದೀನಾವು ಅವರ ವಶವಾಯಿತು. ಅದರಿಂದಾಗಿ ಇಮಾಮ್ ಮಾಲಿಕರೂ ಸೇರಿ ನಗರದ ಹೆಚ್ಚಿನ ಪೌರರು ಮನ್ಸೂರರಿಗೆ ನೀಡಿದ್ದ ಅನುಸರಣಾ

ಪ್ರತಿಜ್ಞೆಯಿಂದ(ಬೈಅತ್) ಮುಕ್ತರಾದರು. ದಂಗೆಯಲ್ಲಿ ಇಮಾಮ್ ಮಾಲಿಕರೂ ಸಕ್ರಿಯ ಪಾತ್ರ ವಹಿಸಿದ್ದರು. ಕ್ರಾಂತಿಯು ವಿಫಲಗೊಂಡಾಗ ಮನ್ಸೂರರ ಭಟರು ಇಮಾಮ್ ಮಾಲಿಕರನ್ನು ಜೈಲಿಗೆ ಹಾಕಿ ಕಠೋರವಾಗಿ ಹಿಂಸಿಸಿದರು. ಜೈಲಿನಲ್ಲಿ ಅವರು ರೋಗ ಪೀಡಿತರಾದರು. ಅಲ್ಲಿಯೇ ನಿಧನರಾದರು.

ಈಜಿಪ್ಟ್, ಮೊರೊಕ್ಕೊ ಮುಂತಾದ ಆಫ್ರಿಕನ್ ರಾಷ್ಟ್ರಗಳು, ಸ್ಪೈನ್ ಮುಂತಾದೆಡೆಗಳಲ್ಲಿ ಮಾಲಿಕೀ ಮದ್ಹಬ್ ಹೆಚ್ಚು ಪ್ರಚಾರದಲ್ಲಿದೆ.

★★★★★★

ಮಾಲಿಕ್‌ರು ಬಹಳ ಕಷ್ಟದಿಂದ ವಿದ್ಯಾರ್ಜನೆ ಮಾಡಿದ್ದರು. ಕಡು ಬಡತನವೇ ಅದಕ್ಕೆ ಕಾರಣವಾಗಿತ್ತು. ಶಿಕ್ಷಣದ ಖರ್ಚಿಗಾಗಿ ಮನೆಯ ಪಕ್ಕಾಸನ್ನೂ ಮಾರಬೇಕಾಯಿತು.

ಸುಮಾರು 900ಕ್ಕೂ ಅಧಿಕ ಗುರುಗಳಿಂದ ಅವರು ಶಿಕ್ಷಣ ಪಡೆದಿದ್ದಾರೆ.

★★★★★★

ಅಬ್ದುಲ್ಲಾ ಬಿನ್ ನಾಫಿಅ್ ಹೇಳುತ್ತಾರೆ: ಮಾಲಿಕ್‌ರ ಶಿಷ್ಯನಾಗಿ ನಾನು 35 ವರ್ಷ ಕಲಿತೆ.

ಇಮಾಮ್ ಮಾಲಿಕರಿಂದ ವಿದ್ಯೆ ಕಲಿಯಲಿಕ್ಕಾಗಿ ಇಬ್ನು ಕಾಸಿಮ್ ಎಷ್ಟು ಹಣ ಖರ್ಚು ಮಾಡಿದ್ದಾರೆ ಗೊತ್ತೇ? ಒಂದು ಸಾವಿರ ಮಿಸ್ಕಾಲ್ ಚಿನ್ನ! ಆ ಕಥೆಯನ್ನು ವಿವರಿಸುತ್ತಾ ಇಬ್ನು ಕಾಸಿಮ್ ಹೇಳುತ್ತಾರೆ: ''ಮಾಲಿಕ್‌ರಿಂದ ಶಿಕ್ಷಣ ಪಡೆಯಲಿಕ್ಕಾಗಿ ನಾನು ಅರೇಬಿಯಾಕ್ಕೆ 12 ಬಾರಿ ಪ್ರಯಾಣಿಸಿದ್ದೆ. ಪ್ರತಿ ಪ್ರಯಾಣಕ್ಕೂ ತಲಾ 1000 ದೀನಾರ್ ಖರ್ಚಾಗುತ್ತಿತ್ತು.''

ಮತ್ತೊಮ್ಮೆ ಇಬ್ನು ಕಾಸಿಮ್ ಹೇಳಿದ್ದಾರೆ: ''ಯಾವಾಗಲೂ ಬೆಳಗಾತ ನಾನು ಮಾಲಿಕ್‌ರ ಮನೆಗೆ ಹೋಗುತ್ತಿದ್ದೆ. 3 ಅಥವಾ 4 ವಿಷಯಗಳನ್ನು ಕೇಳಿ ಕಲಿಯುತ್ತಿದ್ದೆ. ಅವರ ಉತ್ತರದಿಂದ ನನಗೆ ಸಂಪೂರ್ಣ ತೃಪ್ತಿಯಾಗುತ್ತಿತ್ತು.''

ಹಾಗೆಯೇ ಒಂದು ದಿನ ಪ್ರಭಾತದಲ್ಲಿ ನಾನು ಮಾಲಿಕ್‌ರ ಮನೆಗೆ ಹೋದೆ. ಸುಬಹ್ ಅದಾನ್ ಆಗಿರಲಿಲ್ಲ. ಸ್ವಲ್ಪ ವಿಶ್ರಮಿಸಬಹುದೆಂದು ಭಾವಿಸಿದೆ. ನಾನು ಮನೆಯ ಅಂಗಳದಲ್ಲಿ ಮಲಗಿದೆ. ಕೂಡಲೇ ನನಗೆ ನಿದ್ದೆ ಬಂದು ಬಿಟ್ಟಿತು.

ಅಲ್ಲಿನ ಓರ್ವ ಯುವತಿಯು ನನ್ನನ್ನು ಕೂಗಿ ಕರೆದಳು. ನನಗೆ ಎಚ್ಚರವಾಯಿತು. ಅಷ್ಟರಲ್ಲಿ ಮಾಲಿಕ್‌ರು ಮಸೀದಿಗೆ ಹೋಗಿದ್ದರು. ಆಕೆ ಹೇಳಿದಳು: ''ನನ್ನ ಯಜಮಾನರು ಮಸೀದಿಗೆ ಹೋಗಿದ್ದಾರೆ. ಅವರು ನಿನ್ನಂತೆ ನಿರ್ಲಕ್ಷ್ಯರಲ್ಲ.''

ನಾನು ಅವರ ಸೇವಕನೆಂದು ಆಕೆ ಭಾವಿಸಿದ್ದಳು. ಹಲವು ವರ್ಷಗಳಿಂದ ನಾನು ನಿತ್ಯ ಅಲ್ಲಿಗೆ ಹೋಗಿ ಬರುವುದನ್ನು ಆಕೆ ನೋಡಿದ್ದಳು.

★★★★★★

ಇಮಾಮ್ ಮಾಲಿಕರ ಶಿಷ್ಯರುಗಳಲ್ಲಿ ಅನೇಕ ವಿದೇಶಿಯರಿದ್ದರು. ಅವರಲ್ಲಿ ಸ್ಪೈನ್‌ನ ಯಹ್ಯಾ ಕೂಡಾ ಸೇರಿದ್ದರು.

ಯಹ್ಯಾರು ಶಿಕ್ಷಣದಲ್ಲಿ ತೀವ್ರ ಆಸಕ್ತಿ ಹೊಂದಿದ್ದರು ಮತ್ತು ಸದ್ಭಕ್ತರಾಗಿದ್ದರು.

ಒಂದು ದಿನ ತರಗತಿ ನಡೆಯುತ್ತಿದ್ದಾಗ ಹೊರಗೆ ಗಲಾಟೆ ಕೇಳಿಸಿತು. ಅಲ್ಲಿ ಒಂದು ಆನೆ ಇತ್ತು. ವಿದ್ಯಾರ್ಥಿಗಳು ಹಿಂದೆಂದೂ ಆನೆಯನ್ನು ನೋಡಿರಲಿಲ್ಲ, ಆದ್ದರಿಂದ ಅವರೆಲ್ಲರೂ ಆನೆಯನ್ನು ನೋಡಲಿಕ್ಕಾಗಿ ಓಡಿದರು.

ಆದರೆ ಯಹ್ಯಾ ಮಾತ್ರ ಹೋಗಲಿಲ್ಲ, ಅವರು ಮತ್ತು ಮಾಲಿಕ್ ಮಾತ್ರ ಅಲ್ಲಿ ಉಳಿದರು.

''ಮಗೂ ನೀನು ಯಾಕೆ ಹೋಗಲಿಲ್ಲಲ ನೀನು ಆನೆಯನ್ನು ನೋಡುವುದಿಲ್ಲವೇ? ನಿನ್ನ ಊರಿನಲ್ಲಿ ಆನೆ ಇಲ್ಲವಲ್ಲಾ!'' ಮಾಲಿಕ್ ಕೇಳಿದರು.

ಅದನ್ನು ಕೇಳಿದಾಗ ಯಹ್ಯಾ ವಿನಯದಿಂದ ಹೇಳಿದರು: ''ಗುರುಗಳೇ, ದೂರದ ಸ್ಪೈನ್‌ನಿಂದ ನಾನು ಆನೆಯನ್ನು ನೋಡಲಿಕ್ಕಾಗಿ ಇಲ್ಲಿಗೆ ಬಂದಿಲ್ಲ, ತಮ್ಮಿಂದ ಶಿಕ್ಷಣ ಪಡೆಯಲಿಕ್ಕಾಗಿ ಬಂದಿದ್ದೇನೆ. ಆನೆಯನ್ನು ನೋಡಲಿಕ್ಕಾಗಿ ಇಷ್ಟು ದೂರ ಬರಬೇಕಾಗಿರಲಿಲ್ಲ.''

ಶಿಷ್ಯನ ಉತ್ತರವು ಮಾಲಿಕ್‌ರನ್ನು ಸಂತುಷ್ಟಗೊಳಿಸಿತು. ಅವರನ್ನು ಅಭಿನಂದಿಸಿ ಅವರಿಗಾಗಿ ಪ್ರಾರ್ಥಿಸಿದರು.

ಆ ಪ್ರಾರ್ಥನೆಯನ್ನು ಅಲ್ಲಾಹ್ ಕೇಳಿದನು. ಅನಂತರ ಯಹ್ಯಾ ಸ್ಪೈನ್‌ನ ಉನ್ನತ ವಿದ್ವಾಂಸರಲ್ಲಿ ಓರ್ವರಾದರು.

ಖಲೀಫ ಹಾರೂನ್ ರಶೀದ್ ಮದೀನಾ ಸಂದರ್ಶನಕ್ಕಾಗಿ ಹೊರಟರು. ಜತೆಯಲ್ಲಿ ಮೊಮ್ಮಕ್ಕಳಾದ ಮಅ್‌ಮೂನ್ ಮತ್ತು ಅಮೀನ್ ಇದ್ದರು.

ಆ ಕಾಲದಲ್ಲಿ ಮದೀನಾದ ಮಸ್ಜಿದುನ್ನಬವಿಯಲ್ಲಿ ಇಮಾಮ್ ಮಾಲಿಕ್ ನಡೆಸಿದ್ದ ಮದರಸದಲ್ಲಿ ಕಲಿಯಲಿಕ್ಕಾಗಿ ವಿದೇಶಗಳಿಂದಲೂ ವಿದ್ಯಾರ್ಥಿಗಳು ಬರುತ್ತಿದ್ದರು.

ಖಲೀಫರು, ಇಮಾಮರ ಆಶ್ರಯದಲ್ಲಿ ತಮ ಮಕ್ಕಳಿಗೆ ಶಿಕ್ಷಣ ಕೊಡಿಸಬಯಸಿದರು. ಆದರೆ ಮದೀನಾದ ಮದರಸಕ್ಕೆ ರಾಜಕುಮಾರರನ್ನು ಕಳುಹಿಸಲು ಅವರಿಗೆ ಮನಸ್ಸಿರಲಿಲ್ಲ.

ಖಲೀಫರು ಮಾಲಿಕ್‌ರನ್ನು ಸಂಪರ್ಕಿಸಿ ತಮ್ಮ ಅಪೇಕ್ಷೆಯನ್ನು ತಿಳಿಸಿದರು. ರಾಜಕುಮಾರರಿಗೆ ಕಲಿಸಬೇಕು. ಆದರೆ, ಅವರು ಮದರಸಕ್ಕೆ ಬರಲಾರರು. ಇಮಾಮರು ಅರಮನೆಗೆ ಬಂದು ಕಲಿಸಬೇಕು.

ಜ್ಞಾನಾರ್ಜನೆಯ ಬಯಕೆಯಿದ್ದರೆ ಗುರುವಿನ ಬಳಿಹೋಗಿ ಕಲಿಯಬೇಕು. ಅವರನ್ನು ಶಿಷ್ಯರ ಬಳಿಗೆ ಕರೆಸುವುದಲ್ಲ; ''ಅಮೀರುಲ್ ಮೂಮಿನೀನ್, ರಾಜಕುಮಾರರಿಗೆ ಕಲಿಸಬಹುದು. ಆದರೆ, ಅವರು ಮದರಸಕ್ಕೆ ಬಂದು ಕಲಿಯಬೇಕು. ನಾನು ಅಲ್ಲಿಗೆ ಬಂದು ಕಲಿಸುವುದಿಲ್ಲ.'' ಅವರು ಖಲೀಫರಿಗೆ ತಿಳಿಸಿದರು.

ಇದನ್ನು ಕೇಳಿ ಖಲೀಫರು ಕೋಪಿಸಲಿಲ್ಲ. ರಾಜಕುಮಾರರನ್ನು ಮದರಸಕ್ಕೆ ಕಳುಹಿಸಲು ಒಪ್ಪಿದರು. ಆದರೆ, ಅವರು ಒಂದು ಅಪೇಕ್ಷೆಯನ್ನು ತಿಳಿಸಿದರು. ರಾಜಕುಮಾರರನ್ನು ಇತರ ವಿದ್ಯಾರ್ಥಿಗಳ ಜತೆಯಲ್ಲಿ ಕೂರಿಸಬಾರದು.

''ಅಮೀರುಲ್ ಮೂಮಿನೀನ್, ಈ ಅಪೇಕ್ಷೆಯನ್ನೂ ಸ್ವೀಕರಿಸಲು ಸಾಧ್ಯವಿಲ್ಲ. ಇಸ್ಲಾಮ್ ಸಮಾನತೆಯ ಧರ್ಮವಾಗಿದೆ. ಮಾನವರೆಲ್ಲರೂ ಸಮಾನರು. ಒಬ್ಬರಿಗೆ ಇನ್ನೊಬ್ಬರ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಆದ್ದರಿಂದ ಪ್ರವಾದಿಯವರ ಈ ಮಸೀದಿಯಲ್ಲಿಯೇ ವಿದ್ಯಾರ್ಥಿಗಳಲ್ಲಿ ಭೇದಭಾವ ತೋರಿಸಲು ನನ್ನಿಂದ ಸಾಧ್ಯವಿಲ್ಲ.''

ಖಲೀಫರು ಇಮಾಮರಿಗೆ ಸಂಪೂರ್ಣ ಶರಣಾದರು. ರಾಜಕುಮಾರರನ್ನು ಮದರಸಕ್ಕೆ ಕಳುಹಿಸಿದರು. ಅವರು ಇತರ ವಿದ್ಯಾರ್ಥಿಗಳ ಜತೆಯಲ್ಲಿ ಕುಳಿತು ಕಲಿತರು.

★★★★★★

ಒಬ್ಬರು ಮಾಲಿಕ್‌ರೊಡನೆ ಅಸಮಾಧಾನವನ್ನು ತೋಡಿಕೊಂಡರು: ''ನಾನು ನಿಮ್ಮ ಸಭೆಗಳಿಗೆ 70 ದಿನ ಹಾಜರಾದೆ. ಕೇವಲ 60 ಹದೀಸ್‌ಗಳನ್ನು ಕಲಿಯಲು ಸಾಧ್ಯವಾಯಿತು.''

''60 ಹದೀಸ್ ಕಲಿತಿರಾ?'' ಅದುವೇ ಧಾರಾಳವೆಂಬ ಧ್ವನಿಯಲ್ಲಿ ಮಾಲಿಕ್ ಉತ್ತರಿಸಿದರು.

★★★★★★

ಖ್ಯಾತ ಹದೀಸ್ ವಿದ್ವಾಂಸರಾದ ಝುಹ್ರಿಯವರೊಡನೆ ರಬೀಅಃ ಹೇಳಿದರು: '' ನೀವು ನಿನ್ನೆ ಹೇಳಿದ ಎಲ್ಲ ಹದೀಸ್‌ಗಳನ್ನು ಇಲ್ಲಿ ಓರ್ವರಿಂದ ನಾವು ಹಿಂದೆಯೇ ಕೇಳಿದ್ದೇವೆ.''

'ಅದು ಯಾರು?'

'ಮಾಲಿಕ್'

'ಮಾಲಿಕ್‌ರೇ, ಅವರನ್ನು ಕರೆ ತನ್ನಿರಿ.'

ಮಾಲಿಕ್ ಬಂದರು. ಝುಹ್ರಿಯವರ ಬೇಡಿಕೆಯಂತೆ 40 ಹದೀಸ್‌ಗಳನ್ನು ಉದ್ಧರಿಸಿದರು.

''ಈ ಎಲ್ಲ ಹದೀಸ್‌ಗಳು ಕೇವಲ ನನಗೆ ಮಾತ್ರ ತಿಳಿದಿತ್ತೆಂದು ಭಾವಿಸಿದ್ದೆ!'' ಝುಹ್ರಿ ಅಚ್ಚರಿಯಿಂದ ಹೇಳಿದರು.

★★★★★★

ಇಮಾಮ್ ಮಾಲಿಕ್‌ರ ಭೇಟಿಗಾಗಿ ಅನೇಕ ಜನರು ದಿನನಿತ್ಯ ಅವರ ಮನೆಯಲ್ಲಿ ಬಂದು ಸೇರುತ್ತಿದ್ದರು. ಅವರ ಸಭೆಯಲ್ಲಿ ಯಾರೂ ಪರಸ್ಪರ ಮಾತಾಡುತ್ತಿರಲಿಲ್ಲ, ಅತ್ತಿತ್ತ ತಿರುಗಿ ನೋಡುತ್ತಿರಲಿಲ್ಲ, ಜನರು ಸರದಿ ಪ್ರಕಾರ ಬಂದು ಅವರಿಂದ ಫತ್ವ ಕೇಳುತ್ತಿದ್ದರು. ಆ ಗುಂಪಿನಲ್ಲಿ ಗಣ್ಯ ವ್ಯಕ್ತಿಗಳೂ ಇರುತ್ತಿದ್ದರು. ಆ ಮಂದಿಯೂ ಅವರನ್ನು ಬಹಳವಾಗಿ ಗೌರವಿಸುತ್ತಿದ್ದರು.

'ಹೌದು' ಅಥವಾ 'ಅಲ್ಲ' ಎಂದು ಮಾತ್ರ ಅವರು ಹೇಳುತ್ತಿದ್ದರು. ಅನಂತರ ಅವರು ಮರಳಿ ಹೋಗುತ್ತಿದ್ದರು. 'ನಿಮ್ಮ ಮಾತಿಗೆ ಆಧಾರವೇನು?' ಎಂದು ಅವರು ಪ್ರಶ್ನಿಸುತ್ತಿರಲಿಲ್ಲ.

★★★★★★

ಅಬ್ದುಲ್ಲಾ ಉಮರಿಯವರು ಪ್ರಖ್ಯಾತ 'ಝುಹಿದ್'(ವಿರಕ್ತ) ಆಗಿದ್ದರು. ಹೆಚ್ಚಿನ ವೇಳೆ ಆರಾಧನೆಯಲ್ಲಿ ತಲ್ಲೀನರಾಗುತ್ತಿದ್ದರು. ಇಮಾಮ್ ಮಾಲಿಕರ ಆರಾಧನೆಯು ಕಡಿಮೆಯೆಂದು ಭಾವಿಸಿದ ಅವರು ಇಮಾಮರಿಗೆ ಹೀಗೆ ಉಪದೇಶಿಸಿದರು: ''ಆರಾಧನೆಯಲ್ಲಿ ಸ್ವಲ್ಪ ಹೆಚ್ಚು ಗಮನ ಹರಿಸಬೇಕು. ನಮಾಝ್, ಉಪವಾಸ ಮತ್ತು ದಿಕ್ರ್‌ಗಳಲ್ಲಿ ಹೆಚ್ಚು ಸಮಯ ಕಳೆಯಬೇಕು.''

ಅದಕ್ಕೆ ಇಮಾಮ್ ಹೇಳಿದ ಉತ್ತರ ಹೀಗಿತ್ತು: ''ಅಲ್ಲಾಹನು ಮಾನವರಿಗೆ ಅನ್ನವನ್ನು ವಿತರಿಸಿರುವಂತೆಯೇ ಕರ್ಮವನ್ನೂ ವಿತರಿಸಿದ್ದಾನೆ. ಕೆಲವರಿಗೆ ನಮಾಝ್‌ನಲ್ಲಿ ವಿಶೇಷ ಆಸಕ್ತಿಯಿರುತ್ತದೆ. ಉಪವಾಸದಲ್ಲಿ ಅಷ್ಟಿರಲಾರದು. ಕೆಲವರು ದಾನಧರ್ಮದಲ್ಲಿ ಆಸಕ್ತರಾಗಿರುತ್ತಾರೆ. ಉಪವಾಸದ ವಿಷಯದಲ್ಲಿ ಅಷ್ಟೊಂದು ಆಸಕ್ತಿಯಿರುವುದಿಲ್ಲ. ಕೆಲವರಿಗೆ ಜಿಹಾದ್‌ನಲ್ಲಿ ಆಸಕ್ತಿಯಿರಬಹುದು. ಇತರ ವಿಷಯಗಳಲ್ಲಿ ಇರಲಾರದು.''

''ವಿದ್ಯೆಯ ಪ್ರಚಾರವೂ ಬಹಳ ಶ್ರೇಷ್ಠ ಕಾರ್ಯವಾಗಿದೆ. ನನಗೆ ಅದರಲ್ಲಿ ಆಸಕ್ತಿಯಿದೆ. ಅದರಲ್ಲಿ ನನಗೆ ಸಂಪೂರ್ಣ ತೃಪ್ತಿಯಿದೆ. ಇದು ಇತರ ಕರ್ಮಗಳಿಗಿಂತ ಕೀಳೆಂಬ ಅಭಿಪ್ರಾಯ ನನಗಿಲ್ಲ. ನಾವೆಲ್ಲರೂ ಒಳಿತು ಮತ್ತು ಸತ್ಕರ್ಮದಲ್ಲಿರಬೇಕೆಂಬುದೇ ನನ್ನ ಬಯಕೆಯಾಗಿದೆ.''

★★★★★★

ಇಬ್ರಾಹೀಮ್ ಬಿನ್ ತಹಾನ್ ಒಂದು ಘಟನೆಯನ್ನು ವಿವರಿಸಿದ್ದಾರೆ, ''ವಿದ್ಯಾರ್ಜನೆಗಾಗಿ ನಾನು ಮದೀನಾಕ್ಕೆ ಹೋದೆ. ಅಲ್ಲಿ ಕಲಿತದ್ದನ್ನೆಲ್ಲ ಬರೆದುಕೊಂಡು ಅನಂತರ ಕೂಫಾಕ್ಕೆ ಹೋದೆ. ಅಲ್ಲಿ ಇಮಾಮ್ ಅಬೂ ಹನೀಫಾರನ್ನು ಭೇಟಿಯಾದಾಗ ಅವರು ಕೇಳಿದರು: ''ನೀವು ಯಾರ್ಯಾರಿಂದ ವಿದ್ಯೆ ಕಲಿತಿರಿ. ಮಾಲಿಕ್‌ರಿಂದ ಏನಾದರೂ ಬರೆದು ತೆಗೆದು ಕೊಂಡಿದ್ದೀರಾ?''

''ಹೌದು''

ಆಗ ಅಬೂ ಹನೀಫಾರು ಪೆನ್ನು ಮತ್ತು ಕಾಗದ ತಂದರು. ''ಮಾಲಿಕ್‌ರಿಂದ ಬರೆದು ತಂದಿರುವುದನ್ನು ಒಮ್ಮೆ ಓದಿರಿ.''

''ನಾನು ಅದನ್ನು ಓದಿದೆ. ಅವರು ಬರೆದುಕೊಂಡರು.''

★★★★★★

ಖುತೈಬ ಹೇಳುತ್ತಾರೆ: ''ಇಮಾಮ್ ಮಾಲಿಕ್ ಉತ್ತಮ ಉಡುಪುಗಳನ್ನು ಧರಿಸಿ, ಸುರ್ಮಾ ಹಾಕಿ, ಸುಗಂಧ ಲೇಪಿಸಿ ತಮ್ಮ ಸಭೆಗೆ ಬರುತ್ತಿದ್ದರು. ತರುವಾಯ ಪ್ರಧಾನ ಸ್ಥಳದಲ್ಲಿ

ಕುಳಿತುಕೊಳ್ಳುತ್ತಿದ್ದರು. ಬೀಸಣಿಗೆ ತರಿಸುತ್ತಿದ್ದರು. ಅಲ್ಲಿ ನೆರೆದಿದ್ದ ಎಲ್ಲರಿಗೂ ಬೀಸಣಿಗೆ ಕೊಡುತ್ತಿದ್ದರು.''

ಹದೀಸ್ ಉದ್ಧರಿಸುವುದಕ್ಕಿಂತ ಮುಂಚೆ ಅವರು ವುಝೂ ಮಾಡುತ್ತಿದ್ದರು. ಗಡ್ಡವನ್ನು ಅಂದವಾಗಿ ಬಾಚುತ್ತಿದ್ದರು. ಸಭೆಯಲ್ಲಿ ಪ್ರಧಾನ ಸ್ಥಳದಲ್ಲಿ ಕುಳಿತುಕೊಳ್ಳುತ್ತಿದ್ದರು. ಆ ಮುಖದಲ್ಲಿ ಎಂತಹ ಕಾಂತಿ! ಎಂತಹ ಗಾಂಭೀರ್ಯ!

ಇನ್ನೊಂದು ವರದಿಯಲ್ಲಿ ಹೀಗಿದೆ:

ಮಾಲಿಕ್‌ರು ಕರ್ಮಶಾಸ್ತ್ರದ ಬಗ್ಗೆ ವಿವರಿಸುವಾಗ ಮೊದಲಿನಂತೆಯೇ ಕುಳಿತು ಕೊಳ್ಳುತ್ತಿದ್ದರು. ಆದರೆ ಹದೀಸ್ ವಿವರಿಸುವಾಗ ವಿಶೇಷ ಸಿದ್ಧತೆ ನಡೆಸುತ್ತಿದ್ದರು. ಸ್ನಾನ ಮಾಡಿ ಸುಗಂಧ ಲೇಪಿಸಿ ಹೊಸ ಉಡುಪು ಧರಿಸುತ್ತಿದ್ದರು. ಮುಂಡಾಸು ಧರಿಸುತ್ತಿದ್ದರು. ವಿನಯ, ಭಕ್ತಿ ಮತ್ತು ಗಾಂಭೀರ್ಯದಿಂದ ಪೀಠದಲ್ಲಿ ಕುಳಿತುಕೊಳ್ಳುತ್ತಿದ್ದರು. ಊದು ಉರಿಸುತ್ತಿದ್ದರು, ಸಭೆ ಮುಗಿಯುವ ತನಕ.

''ಈ ಕಾರ್ಯಗಳಿಗೆ ಪ್ರವಾದಿಯವರ ಹದೀಸ್‌ನೊಂದಿಗಿನ ಗೌರವವೇ ಪ್ರೇರಣೆಯಾಗಿದೆ'' ಎಂದು ಹೇಳುತ್ತಿದ್ದರು.

ದಾರಿಯಲ್ಲಿ ನಿಂತು ಅಥವಾ ಅವಸರದಿಂದ ಅವರು ಹದೀಸ್ ಉದ್ಧರಿಸುತ್ತಿರಲಿಲ್ಲ.

★★★★★★

''ಅಕ್ರಮಿಗಳಾದ ಆಡಳಿತಗಾರರನ್ನು ನೋಡಲಿಕ್ಕಾಗಿ ನೀವು ಯಾಕೆ ಹೋಗುತ್ತೀರಿ?'' ಓರ್ವರು ಆತಂಕದ ಧ್ವನಿಯಲ್ಲಿ ಇಮಾಮ್ ಮಾಲಿಕರೊಡನೆ ಪ್ರಶ್ನಿಸಿದರು:

''ಹೋಗದಿದ್ದರೆ ಅಕ್ರಮವನ್ನು ಎದುರಿಸುವುದು ಹೇಗೆ? ಸತ್ಯವು ಬಹಿರಂಗವಾಗುವುದು ಹೇಗೆ?'' ಮಾಲಿಕ್ ಪ್ರತ್ಯುತ್ತರಿಸಿದರು.

ಇಮಾಮ್ ಮಾಲಿಕ್ ಹೇಳುತ್ತಾರೆ: ''ನಾನು ಎಷ್ಟೋ ಬಾರಿ ಖಲೀಫ ಮನ್ಸೂರರ ಭೇಟಿಗಾಗಿ ಹೋಗಿದ್ದೇನೆ. ಅವರನ್ನು ನೋಡುವವರು ಅವರ ಕೈ ಚುಂಬಿಸಬೇಕು. ಅದು ಸಂಪ್ರದಾಯ. ಆದರೆ ನಾನು ಒಮ್ಮೆಯೂ ಹಾಗೆ ಮಾಡಿಲ್ಲ.''

★★★★★★

ಖಲೀಫ ಮನ್ಸೂರರು ಇಮಾಮ್ ಮಾಲಿಕರೊಡನೆ ಕೆಲವು ಸಂಶಯಗಳನ್ನು ಕೇಳಿದರು. ಪ್ರತಿಯೊಂದು ಪ್ರಶ್ನೆಗೂ ಮಾಲಿಕ್‌ರು ಸೂಕ್ತ ಉತ್ತರ ಕೊಟ್ಟರು. ಅದನ್ನು ಕೇಳಿ ಖಲೀಫರಿಗೆ ಸಂತೋಷವಾಯಿತು. ಅವರು ಹೇಳಿದರು: ''ಮಾಲಿಕ್, ನಿಮ್ಮಂತೆ ಬುದ್ಧಿ ಮತ್ತು ತಿಳುವಳಿಕೆಯಿರುವವರು ಯಾರೂ ಇಲ್ಲ.''

''ಇದ್ದಾರೆ, ಧಾರಾಳವಿದ್ದಾರೆ.''

''ಇದ್ದಾರೆಯೇ? ಯಾರ್‍ಯಾರು?''

''ಅವರೆಲ್ಲರ ಹೆಸರು ನನಗೆ ನೆನಪಿಲ್ಲ.''

''ಇರಲಾರರು. ಸುಮ್ಮನೆ ಹೇಳುತ್ತೀರಿ.'' ಮನ್ಸೂರ್ ಹೇಳಿದರು. ಅವರು ಪುನಃ ಹೀಗೆಂದರು: ''ನನಗೆ ಬಿಡುವು ದೊರೆಯಲಿ. ನಾನು ನಿಮ್ಮ ಮದ್ಹಬನ್ನು ಬರೆದಿಡುವ ವ್ಯವಸ್ಥೆ ಮಾಡುತ್ತೇನೆ. ಕುರ್‌ಆನನ್ನು ಬರೆದಿರಿಸುವಂತೆ. ತರುವಾಯ ಆ ಗ್ರಂಥವನ್ನು ದೇಶದಾದ್ಯಂತ ಕಳುಹಿಸುತ್ತೇನೆ.''

ಆದರೆ ಮಾಲಿಕ್‌ರು ಅದಕ್ಕೆ ಒಪ್ಪಲಿಲ್ಲ.

★★★★★★

ಒಮ್ಮೆ ಮಾಲಿಕ್‌ರೊಡನೆ 48 ಸಮಸ್ಯೆಗಳ ಕುರಿತು ತೀರ್ಪು ಕೇಳಲಾಯಿತು. ಅವುಗಳಲ್ಲಿ 32ರ ಕುರಿತು ಅವರು, ''ನನಗೆ ತಿಳಿದಿಲ್ಲ'' ಎಂದು ಹೇಳಿದರು.

''ಶೈಖ್, ನಾನು ಬಹಳ ದೂರದಿಂದ ಬಂದಿದ್ದೇನೆ. ಊರಿನವರ ಪ್ರತಿನಿಧಿಯಾಗಿ ಫತ್ವ ಕೇಳಲಿಕ್ಕೆ ಬಂದಿದ್ದೇನೆ. ಊರಿನಿಂದ ಹೊರಟು 6 ತಿಂಗಳಾಯಿತು'' ಒಬ್ಬರು ಒಳಗೆ ಬಂದು ಇಮಾಮ್ ಮಾಲಿಕರೊಡನೆ ಹೇಳಿದರು.

''ಸಮಸ್ಯೆಯೇನು?''

ಆಗಂತುಕನು ಸಮಸ್ಯೆಯನ್ನು ತಿಳಿಸಿದ.

''ಆ ಬಗ್ಗೆ ನನಗೆ ತಿಳಿದಿಲ್ಲ''ಎಂದು ಮಾಲಿಕ್ ಹೇಳಿದರು.

ಇದರಿಂದ ಆಗಂತುಕನಿಗೆ ತುಂಬಾ ನಿರಾಶೆಯಾಯಿತು. ''ನಾನು ಹಿಂತಿರುಗಿ ಹೋಗಿ ಊರಿನವರೊಡನೆ ಏನೆಂದು ಹೇಳಲಿ?''

''ಮಾಲಿಕ್‌ನಿಗೆ ತಿಳಿದಿಲ್ಲವೆಂದು ಹೇಳಿರಿ.''

★★★★★★

ಇಮಾಮ್ ಮಾಲಿಕ್ ಹೇಳಿದ್ದಾರೆ: ''ನಾನು ಫತ್ವ ನೀಡಲು ಯೋಗ್ಯನೆಂದು 70 ವಿದ್ವಾಂಸರು ದೃಢೀಕರಿಸಿದ ಬಳಿಕ ನಾನು ಫತ್ವಾ ನೀಡಲಾರಂಭಿಸಿದೆ.''

★★★★★★

ಕೆಲವರು ಇಮಾಮ್ ಮಾಲಿಕರ ಬಗ್ಗೆ ಅಸೂಯೆಯಿಂದ ಖಲೀಫಾ ಮನ್ಸೂರರ ಪಿತೃ ಸಹೋದರನ ಪುತ್ರ ಮತ್ತು ಮದೀನಾದ ರಾಜ್ಯಪಾಲ ಜಅ್‌ಫರ್‌ರೊಡನೆ ಚಾಡಿ ಹೇಳಿದರು: ''ಮಾಲಿಕ್‌ರು ಮನ್ಸೂರರನ್ನು ಖಲೀಫರೆಂದು ಅಂಗೀಕರಿಸುವುದಿಲ್ಲ. ತಲಾಕ್ ಹೇಳಲು ನಿರ್ಬಂಧಿಸಲ್ಪಟ್ಟವನ ತಲಾಕ್ ಸಿಂಧುವಲ್ಲವೆಂದು ಅವರ ಅಭಿಪ್ರಾಯ. ಅದಕ್ಕೆ ಹೋಲಿಸಿದರೆ ಮನ್ಸೂರರ ಆಧಿಪತ್ಯವೂ ಸಿಂಧುವಲ್ಲ. ಅದನ್ನು ಜನರು ಮನಸಾರೆ ಅಂಗೀಕರಿಸುವುದಿಲ್ಲ. ಅದನ್ನು ಜನರ ಮೇಲೆ ಹೇರಲಾಗಿದೆಯೆಂದು ಅವರು ವಾದಿಸುತ್ತಾರೆ.''

ಇದನ್ನು ಕೇಳಿ ಜಅ್‌ಫರ್‌ರಿಗೆ ಸಹಿಸಲಾಗಲಿಲ್ಲ. ಇಮಾಮರನ್ನು ಕರೆಸಿ ಪ್ರಶ್ನಿಸಿದರು. ಹಿಂಸಿಸಿದರು. ಕ್ರೂರವಾಗಿ ಥಳಿಸಿದರು, ಕೈಗಳನ್ನು ಬಿಗಿಯಾಗಿ ಹಿಡಿದೆಳೆದಾಗ ಅವು ಭುಜದಿಂದ ಜಾರಿದುವು. ತಲೆ ಬೋಳಿಸಿದರು. ನಗ್ನಗೊಳಿಸಿದರು. ಹಾಗೆಯೇ ಒಂಟೆಯ ಮೇಲೆ ಕುಳ್ಳಿರಿಸಿ ಪೇಟೆಯಲ್ಲಿ ಮೆರವಣಿಗೆ ಮಾಡಿದರು. ನನ್ನ ವಾದವು ತಪ್ಪೆಂದು ಸಾರಬೇಕೆಂದು ಆಜ್ಞಾಪಿಸಿದರು.

ಆದರೆ ಇಮಾಮರು ಹೀಗೆ ಕೂಗಿ ಹೇಳಿದರು: ''ನನ್ನ ಪರಿಚಯಸ್ಥರೆಲ್ಲರೂ ನನ್ನನ್ನು ಅರಿತಿದ್ದಾರೆ. ತಿಳಿಯದವರಿಗೆ ಪರಿಚಯಗೊಳಿಸುತ್ತಿದ್ದೇನೆ. ನಾನು ಮಾಲಿಕ್. ಅನಸ್‌ರ ಪುತ್ರ ಮಾಲಿಕ್. ನಾನು ಹೇಳುತ್ತಿದ್ದೇನೆ, ನಿರ್ಬಂಧಿಸಲ್ಪಟ್ಟಾತನ ತಲಾಕ್ ಸಿಂಧುವಲ್ಲ, ಸಿಂಧುವಲ್ಲ.''

ಹೀಗೆ ಕೊನೆಯಲ್ಲಿ ಜಅ್‌ಫರ್ ಸೋತರು. ಕೋಪಾಂಧರಾಗಿ ಅವರು ಗದರಿಸಿದರು: ''ಆ ಹುಚ್ಚನನ್ನು ಪೇಟೆಯಲ್ಲಿ ಸುತ್ತಾಡಿಸಿದ್ದು ಸಾಕು! ಬೇಗನೆ ಕೆಳಗಿಳಿಸಿ.''

ಜಅ್‌ಫರ್‌ರು ಇಮಾಮರನ್ನು ಪೀಡಿಸಿದ ಸುದ್ದಿ ಖಲೀಫ ಮನ್ಸೂರರಿಗೆ ತಿಳಿಯಿತು. ಅದರಿಂದ ಅವರು ಬಹಳ ದುಃಖಿತರಾದರು. ಅವರಿಗೆ ಜಅ್‌ಫರ್‌ರ ಬಗ್ಗೆ ಕೋಪ ಬಂತು. ಅವರಿಗೆ ಪ್ರತೀಕಾರ ಕೈಗೊಳ್ಳುವ ಅವಕಾಶ ನೀಡಿದರು.

ಆದರೆ ಇಮಾಮ್ ಪ್ರತೀಕಾರ ಕೈಗೊಳ್ಳಲಿಲ್ಲ.

★★★★★★

ಇಮಾಮ್ ಮಾಲಿಕರ ಉಂಗುರದಲ್ಲಿ ''ನನಗೆ ಅಲ್ಲಾಹ್ ಸಾಕು! ಭರವಸೆಗೆ ಆತನೇ ಯೋಗ್ಯ'' ಎಂಬ ವಾಕ್ಯವಿತ್ತು.

★★★★★★

ಇಮಾಮ್ ಮಾಲಿಕ್ ಮದೀನಾದಲ್ಲಿ ಒಮ್ಮೆಯೂ ವಾಹನದಲ್ಲಿ ಸಂಚರಿಸಲಿಲ್ಲ. ಹೆಚ್ಚು ಪ್ರಾಯವಾಗಿದ್ದಾಗಲೂ ತೀರಾ ಬಳಲಿದ್ದಾಗಲೂ ಹೋಗಿರಲಿಲ್ಲ. ಆ ಕುರಿತು ಅವರು ಹೇಳಿದರು: ''ಪ್ರವಾದಿಯವರನ್ನು ದಫನ ಮಾಡಿರುವ ಮದೀನಾದಲ್ಲಿ ವಾಹನದಲ್ಲಿ ಸಂಚರಿಸುವುದನ್ನು ಅವರಿಗೆ ತೋರುವ ಅಗೌರವವೆಂದು ಭಾವಿಸುತ್ತೇನೆ.''

''ಮನೆಯಲ್ಲಿದ್ದಾಗ ಇಮಾಮ್ ಮಾಲಿಕರು ಹೆಚ್ಚಾಗಿ ಯಾವ ಕೆಲಸ ಮಾಡುತ್ತಿದ್ದರು'' ಮಾಲಿಕ್‌ರ ಸಹೋದರಿಯೊಡನೆ ಓರ್ವರು ಕೇಳಿದರು.

''ಕುರ್‌ಆನ್ ಪಾರಾಯಣ ಮತ್ತು ಗ್ರಂಥ ರಚನೆ.'' ಇಮಾಮ್ ಮಾಲಿಕರು ತಮ್ಮ ಕೈಯಿಂದಲೇ ಸುಮಾರು 1ಲಕ್ಷ ಹದೀಸ್‌ಗಳನ್ನು ಬರೆದಿದ್ದಾರೆ.

★★★★★★

ಇಮಾಮ್ ಮಾಲಿಕ್ ಹೇಳುತ್ತಾರೆ, ''ಕೇಳಿದ್ದನ್ನೆಲ್ಲ ಹೇಳುವ ವಿದ್ವಾಂಸನಿಗೆ ಇಮಾಮ್ ಆಗುವ ಯೋಗ್ಯತೆಯಿಲ್ಲ.''

‘‘ನಾನೋರ್ವ ಮಾನವ. ನನ್ನ ಅಭಿಪ್ರಾಯ ಸರಿಯಾಗಬಹುದು, ತಪ್ಪಾಗಬಹುದು. ಆದ್ದರಿಂದ ಅವುಗಳನ್ನು ಪರಿಶೀಲಿಸೋಣ. ಕುರ್‌ಆನ್ ಮತ್ತು ಪ್ರವಾದಿಚರ್ಯೆಗೆ ಸರಿಹೊಂದುವುದನ್ನು ಮಾತ್ರ ಸ್ವೀಕರಿಸಬೇಕು. ಇತರವುಗಳನ್ನು ತಿರಸ್ಕರಿಸಬೇಕು.’’

‘‘ಕೆಲವು ಹದೀಸ್‌ಗಳನ್ನು ನಾನು ಉದ್ಧರಿಸಿ ಬಿಟ್ಟಿದ್ದೇನೆ. ಅವುಗಳನ್ನು ಉದ್ಧರಿಸದಿರುತ್ತಿದ್ದರೆ ಉತ್ತಮವಿತ್ತೆಂದು ಈಗ ಭಾಸವಾಗುತ್ತಿದೆ. ಅವುಗಳನ್ನು ಉದ್ಧರಿಸಿದ್ದಕ್ಕಾಗಿ ನನಗೆ ಕೊರಡೆ ಏಟು ಬಿದ್ದಿದೆ. ಪ್ರತಿಯೊಂದು ಹದೀಸ್‌ಗೂ ಎರಡು ಏಟುಗಳು.’’

‘‘ಕೆಲವೊಮ್ಮೆ ನಾನು ಹದೀಸ್‌ಗಳಿಗಾಗಿ ರಾತ್ರಿಹಗಲೆನ್ನದೆ ಹಲವು ದಿನಗಳ ಕಾಲ ಪ್ರಯಾಣಿಸಿದ್ದೇನೆ.’’

★★★★★★

ಇಮಾಮ್ ಶಾಫಿಈ ಹೇಳುತ್ತಾರೆ: ‘‘ಇಮಾಮ್ ಮಾಲಿಕ್ ವಿದ್ವಾಂಸರ ನಕ್ಷತ್ರವಾಗಿದ್ದಾರೆ.’’

ಒಂದು ಹದೀಸ್‌ನ ಯಾವುದಾದರೂ ಭಾಗದ ಬಗ್ಗೆ ಸಂಶಯ ತಲೆದೋರಿದರೆ ಅವರು ಆ ಹದೀಸನ್ನೇ ತಿರಸ್ಕರಿಸಿ ಬಿಡುತ್ತಿದ್ದರು. ಅವರು ಅಷ್ಟೊಂದು ಎಚ್ಚರ ವಹಿಸುತ್ತಿದ್ದರು.

ಅಶ್‌ಅಬ್ ಹೇಳುತ್ತಾರೆ: ‘‘ಮಾಲಿಕ್‌ರ ಮುಂದೆ ಇಮಾಮ್ ಅಬೂ ಹನೀಫಾರು ತಂದೆಯ ಮುಂದೆ ನಿಂತ ಮಗನಂತೆ ವರ್ತಿಸುತ್ತಿದ್ದರು.’’



# ಇಮಾಮ್ ಶಾಫಿಈ (ರ)
## (ಹಿಜರಿ. 150-204/ ಕ್ರಿ.ಶ. 767-820)

ಶಾಫಿಈ ಮದ್ಹಬ್‌ನ ಮೂಲ ಪುರುಷ. ಹಿಜರಿ 2ನೇ ಶತಮಾನದ ಇಸ್ಲಾಮಿ ನವೋತ್ಥಾನ ನಾಯಕ. ನೈಜ ಹೆಸರು ಮುಹಮ್ಮದ್. ಕರೆಯುತ್ತಿದ್ದ ಹೆಸರು ಅಬೂ ಅಬ್ದುಲ್ಲಾ. ಕುರೈಶ್ ಗೋತ್ರಕ್ಕೆ ಸೇರಿದವರು. ಅರೇಬಿಯಾದ ಇದ್ರೀಸ್ ತಂದೆ. ತಾಯಿ ನಾಲ್ಕನೇ ಖಲೀಫ ಅಲೀ ಬಿನ್ ಅಬೂ ತಾಲಿಬರ ವಂಶ ಪರಂಪರೆಯ ಫಾತಿಮಾ. ಜನನ ಫೆಲೆಸ್ತೀನ್‌ನ ಗಾಝಾದಲ್ಲಿ. ಇಮಾಮ್ ಅಬೂ ಹನೀಫಾ ನಿಧನರಾದ ದಿನವೇ ಶಾಫಿಈ ಜನಿಸಿದರು.

ಇಮಾಮ್ ಶಾಫಿಈಯವರು ಮಗುವಾಗಿದ್ದಾಗಲೇ ತಂದೆ ನಿಧನರಾಗಿದ್ದರು. ಚಿಕ್ಕಂದಿನಲ್ಲಿಯೇ ಇಸ್ಲಾಮಿ ಶಿಕ್ಷಣದಲ್ಲಿ ಪಾಂಡಿತ್ಯ ಪಡೆದರು. ಏಳನೇ ವಯಸ್ಸಿನಲ್ಲಿ ಕುರ್‌ಆನ್ ಕಂಠಪಾಠ ಮಾಡಿದರು. ಹತ್ತನೇ ವಯಸ್ಸಿನಲ್ಲಿ ಇಮಾಮ್ ಮಾಲಿಕರ ಖ್ಯಾತ ಹದೀಸ್ ಗ್ರಂಥವಾಗಿದ್ದ 'ಮುವತ್ತಾ'ವನ್ನು ಕಂಠಪಾಠ ಮಾಡಿದರು. 12ನೇ ವಯಸ್ಸಿನಲ್ಲಿ ಹದೀಸ್ ಪಂಡಿತರಾದರು. 15ನೇ ವಯಸ್ಸಿನಲ್ಲಿ ಮುಫ್ತಿಯಾದರು. ಇಮಾಮ್ ಮಾಲಿಕರು ಅವರ ಗುರುವರ್ಯರಾಗಿದ್ದಾರೆ. ಮುಸ್ಲಿಮ್ ಬಿನ್ ಖಾಲಿದಿ ಸಂಜೀ ಮತ್ತು ಸುಫ್‌ಯಾನ್ ಬಿನ್ ಉಯೈನಾರು ಅವರ ಗುರುವೃಂದದಲ್ಲಿ ಸೇರಿದ್ದಾರೆ. ಇಮಾಮ್ ಅಹ್ಮದರು ಅವರ ಶಿಷ್ಯರಾಗಿದ್ದಾರೆ. ಇತರ ಪ್ರಮುಖ ಶಿಷ್ಯರಲ್ಲಿ ಯೂಸುಫುಲ್ ಬುವೈತಿ, ರಬೀಅ್ ಬಿನ್ ಸುಲೈಮಾನ್, ಮಹ್ಕಲ್ ಮುಸ್ನಿ, ಅಝ್ಝಅ್‌ಫರಾನಿ, ಅಬೂ ತೌರ್, ಅಲ್ ಹುಮೈದಿ, ಅಲ್ ಕರಾಬೀಸಿ ಮುಂತಾದವರು ಸೇರಿದ್ದಾರೆ. ಶಿಷ್ಯರಲ್ಲಿ ಅನೇಕ ಮಹಿಳೆಯರೂ ಇದ್ದರು.

ವಿದ್ಯಾರ್ಜನೆಗಾಗಿ ಇಮಾಮ್ ಶಾಫಿಈಯವರು ಬಗ್ದಾದ್, ಈಜಿಪ್ಟ್, ಯಮನ್ ಮುಂತಾದ ಅನೇಕ ದೇಶಗಳಿಗೆ ಭೇಟಿ ನೀಡಿದ್ದಾರೆ. ಅರಬಿ ಭಾಷಾ ವಿದ್ವಾಂಸ ಮತ್ತು ಕವಿಯೂ ಆಗಿದ್ದರು. ಭಾಷೆ ಕಲಿಯಲಿಕ್ಕಾಗಿ ಶುದ್ಧ ಅರಬಿ ಮಾತಾಡುವ ಹುದೈಲ್ ಗೋತ್ರದಲ್ಲಿ 17 ವರ್ಷ ಜೀವಿಸಿದರು. ಅನೇಕ ಕಡೆಗಳಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು. ಕುರ್‌ಆನ್, ಹದೀಸ್, ಫಿಕ್ಹ್, ಅರಬಿ ಭಾಷೆ, ವ್ಯಾಕರಣ, ಕವಿತೆ ಮುಂತಾದ ಅನೇಕ ವಿಷಯಗಳನ್ನು ಕಲಿತರು. ಆದರೆ ಹೆಚ್ಚಿನ ಸಮಯವನ್ನು

ಕರ್ಮಶಾಸ್ತ್ರ(ಫಿಕ್ಹ್) ಕ್ರೋಢೀಕರಣಕ್ಕಾಗಿ ವಿನಿಯೋಗಿಸಿದರು, ಕರ್ಮಶಾಸ್ತ್ರ ವಿಷಯಗಳಲ್ಲಿ ಇಮಾಮ್ ಅಬೂ ಹನೀಫಾರ ನಾಯಕತ್ವದಲ್ಲಿರುವ 'ಅಹ್ಲುರ್ರಾಯ್' ಮತ್ತು ಇಮಾಮ್ ಮಾಲಿಕ್‌ರ ನಾಯಕತ್ವದಲ್ಲಿ ರುವ 'ಅಹ್ಲುಲ್ ಹದೀಸ್'ನ ದೃಷ್ಟಿಕೋನಗಳನ್ನು ಸಮನ್ವಯಗೊಳಿಸುವ ಧೋರಣೆಯನ್ನು ಇಮಾಮ್ ಶಾಫಿಈ ಅವಲಂಬಿಸಿದ್ದರು. ಬಗ್ದಾದ್‌ನ ವಾಸಕಾಲದಲ್ಲೂ ಪ್ರವಾಸ ವೇಳೆಯಲ್ಲೂ ರೂಪುಗೊಂಡ ಅವರ ಹಳೆಯ ಅಭಿಪ್ರಾಯಗಳು 'ಕೌಲುಲ್ ಕದೀಮ್' (ಹಳೆಯ ಅಭಿಪ್ರಾಯಗಳು) ಎಂಬ ಹೆಸರಲ್ಲಿ ಖ್ಯಾತವಾಗಿವೆ. ಆ ಪೈಕಿ ಕೆಲವು ಅಭಿಪ್ರಾಯಗಳ ಮರುಪರಿಶೀಲನೆ ನಡೆಸಿ ತಿದ್ದಿ ಬರೆದರು. ಅದನ್ನು 'ಕೌಲುಲ್ ಜದೀದ್' (ಹೊಸ ಅಭಿಪ್ರಾಯಗಳು) ಎಂದು ಹೇಳಲಾಗುತ್ತದೆ.

ತನ್ನನ್ನು ಓರ್ವ ಇಮಾಮ್ ಆಗಿ ಅಂಗೀಕರಿಸಬೇಕು ಅಥವಾ ತನ್ನ ಮದ್ಹಬನ್ನು ಹಿಂಬಾಲಿಸಬೇಕೆಂದು ಅವರು ಒಮ್ಮೆಯೂ ಒತ್ತಾಯಿಸಿಲ್ಲ.

ನನ್ನ ಅಭಿಪ್ರಾಯವು ಹದೀಸ್‌ಗೆ ವಿರುದ್ಧವೆಂದು ಕಂಡು ಬಂದರೆ ಅದನ್ನು ತಿರಸ್ಕರಿಸಿ ಹದೀಸ್ ಸ್ವೀಕರಿಸಬೇಕೆಂದು ಉಪದೇಶಿಸಿದ್ದಾರೆ. ಅನಂತರದ ಕಾಲಗಳಲ್ಲಿ ಅವರ ಅಭಿಪ್ರಾಯಗಳು ಒಂದು ಮದ್ಹಬ್ ಆಗಿ ರೂಪಾಂತರಗೊಂಡಿತು.

ಆಡಳಿತಗಾರರ ತಪ್ಪು ಧೋರಣೆಗಳನ್ನು ವಿರೋಧಿಸಿದ್ದರಿಂದ ಇಮಾಮ್ ಶಾಫಿಈಯವರು ಬಹಳಷ್ಟು ದಂಡನೆಗಳನ್ನು ಅನುಭವಿಸಬೇಕಾಯಿತು.

ಕೃಶವಾದ ನೀಳ ಕಾಯ. ಬಿಳಿ ಮೈಬಣ್ಣ, ಉರುಟು ಮುಖ, ದಪ್ಪಗಡ್ಡ, ಅದಕ್ಕೆ ಮದರಂಗಿ ಹಚ್ಚುತ್ತಿದ್ದರು. ಸುಂದರ, ಪ್ರಸನ್ನ, ಮಿತಭಾಷಿ ಮತ್ತು ವಿನಯಶೀಲರಾಗಿದ್ದರು.

ಎರಡು ವಿವಾಹವಾಗಿದ್ದರು. ಮೊದಲ ಪತ್ನಿಯು ಮೂರನೇ ಖಲೀಫ ಉಸ್ಮಾನ್ ಬಿನ್ ಅಫ್ಫಾನ್‌ರ ಮೊಮ್ಮಗಳು ಹಮೀದಾ. ಆಕೆಯಲ್ಲಿ ಮೂರು ಮಕ್ಕಳು ಹುಟ್ಟಿದ್ದರು. ಫಾತಿಮಾ, ಝೈನಬ್, ಮುಹಮ್ಮದ್ ಶಾಫಿಈ. ಉನ್ನತ ವಿದ್ವಾಂಸರಾಗಿದ್ದ ಮುಹಮ್ಮದ್ ಶಾಫಿಈ ಹಲಬ್‌ನಲ್ಲಿ ಕಾಝಿಯಾಗಿ ಸೇವೆ ಸಲ್ಲಿಸಿದ್ದರು. ಎರಡನೆಯ ಪತ್ನಿಯಲ್ಲಿ ಹುಟ್ಟಿದ ಹಸನ್ ಚಿಕ್ಕಂದಿನಲ್ಲಿಯೇ ನಿಧನರಾಗಿದ್ದರು.

ಕರ್ಮಶಾಸ್ತ್ರ ಮೀಮಾಂಸೆಯ(ಉಸೂಲುಲ್ ಫಿಕ್ಹ್) ಮೊದಲ ಗ್ರಂಥ 'ಅರ್‍ರಿಸಾಲ'ವನ್ನು ಇಮಾಮ್ ಶಾಫಿಈ ರಚಿಸಿದ್ದರು. ಅವರೇ ಈ ಶಾಸ್ತ್ರದ ಜನಕ. ಒಟ್ಟು ನೂರಕ್ಕೂ ಮಿಕ್ಕಿ ಕೃತಿಗಳನ್ನು ರಚಿಸಿದ್ದಾರೆ. ಅಲ್ ಉಮ್ಮು(ಕರ್ಮ ಶಾಸ್ತ್ರ), 'ಜಮಾವುಲ್ ಇಲ್'(ಪ್ರವಾದಿ ಚರ್ಯೆ), 'ಮುಸ್ನದು ಶಾಫಿಈ'(ಹದೀಸ್ ಸಂಗ್ರಹ), 'ದಿವಾನುಲ್ ಇಮಾಮ್ ಶಾಫಿಈ'(ಕವಿತಾ ಸಂಕಲನ) ಇವು ಇತರ ಪ್ರಧಾನ ಕೃತಿಗಳು.

ಐವತ್ತನಾಲ್ಕನೆಯ ವಯಸ್ಸಿನಲ್ಲಿ ಈಜಿಪ್ಟ್‌ನಲ್ಲಿ ನಿಧನರಾದರು.



ಬಾಲ್ಯಕಾಲದಲ್ಲಿ ಪಾಠ ಶಾಲೆಯಲ್ಲಿ ಕಲಿಯುವಾಗಿನ ಕೆಲವು ಅನುಭವಗಳನ್ನು ಶಾಫಿಈ ದಾಖಲಿಸಿದ್ದಾರೆ. ನಾನು ಅನಾಥನಾಗಿದ್ದೆ. ಕುಟುಂಬವು ಬಡವಾಗಿತ್ತು. ಉಸ್ತಾದರಿಗೆ ಕಾಣಿಕೆ ನೀಡಲು ತಾಯಿಯ ಬಳಿ ಹಣವಿರಲಿಲ್ಲ.

ಉಸ್ತಾದರ ಗೈರು ಹಾಜರಿಯಲ್ಲಿ ತರಗತಿಯ ಉಸ್ತುವಾರಿಯನ್ನು ಅವರು ನನಗೆ ಒಪ್ಪಿಸುತ್ತಿದ್ದರು. ಆ ನೆರವಿನಿಂದ ಅವರು ಸಂತೃಪ್ತರಾಗುತ್ತಿದ್ದರು. ಪ್ರತಿಫಲಕ್ಕೆ ಒತ್ತಾಯಿಸುತ್ತಿರಲಿಲ್ಲ. ಉಸ್ತಾದರು ಹೇಳಿಕೊಟ್ಟ ಪಾಠಗಳನ್ನು ಸಹಪಾಠಿಗಳು ಬರೆಯುತ್ತಿದ್ದರು. ಅವರು ಬರೆದು ಮುಗಿಸುವಾಗ ನನಗೆ ಕಂಠಪಾಠವಾಗುತ್ತಿತ್ತು.

ಇದನ್ನು ತಿಳಿದ ಉಸ್ತಾದರು ನನ್ನೊಡನೆ ಹೇಳಿದರು: ''ಮಗನೇ, ನೀನು ಜಾಣ. ನಿನ್ನಿಂದ ಕಾಣಿಕೆ ಪಡೆಯುವುದು ಸರಿಯಲ್ಲ.''

★★★★★★

ಪಾಠ ಶಾಲೆಯಲ್ಲಿ ಕುರ್‌ಆನ್ ಅಧ್ಯಯನವನ್ನು ಪೂರ್ಣಗೊಳಿಸಿದ ಬಳಿಕ ನಾನು ಮಸೀದಿಯಲ್ಲಿ ವಿದ್ವಾಂಸರ ಸಭೆಗೆ ಹೋಗಲಾರಂಭಿಸಿದೆ. ಅವರಿಂದ ಹದೀಸ್ ಅಥವಾ ಇತರ ಧಾರ್ಮಿಕ ವಿಷಯಗಳನ್ನು ಕಲಿಯುತ್ತಿದ್ದೆ. ಅವುಗಳನ್ನು ಮನನ ಮಾಡುತ್ತಿದ್ದೆ. ಕಾಗದ ಖರೀದಿಸಲು ತಾಯಿಯ ಬಳಿ ಹಣವಿರಲಿಲ್ಲ. ಎಲ್ಲಿಯಾದರೂ ಬಿಳಿ ಎಲುಬಿನ ತುಂಡು ಸಿಕ್ಕಿದರೆ ನಾನು ಅದನ್ನು ತೆಗೆದಿರಿಸುತ್ತಿದ್ದೆ. ಕಲಿತ ವಿಷಯಗಳನ್ನು ಅದರಲ್ಲಿ ಬರೆಯುತ್ತಿದ್ದೆ. ನಮ್ಮ ಮನೆಯಲ್ಲಿ ಒಂದು ದೊಡ್ಡ ಪಾತ್ರೆಯಿತ್ತು. ಅದರಲ್ಲಿ ಸಾಮಾನುಗಳನ್ನು ಇರಿಸಲಾಗುತ್ತಿತ್ತು. ಬರೆದ ಎಲುಬುಗಳನ್ನು ನಾನು ಅದರಲ್ಲಿಯೇ ಇರಿಸುತ್ತಿದ್ದೆ.

ಹೀಗಿರಲು, ಯಮನ್‌ನಿಂದ ಓರ್ವ ಅಧಿಕಾರಿ ಬಂದರು. ಅವರನ್ನು ಭೇಟಿಯಾಗುವಂತೆ ಕೆಲವು ಸಂಬಂಧಿಕರು ತಿಳಿಸಿದರು. ಆದರೆ ಅಲ್ಲಿಗೆ ಹೋಗುವಾಗ ಧರಿಸಲು ಯೋಗ್ಯವಾದ ಉಡುಪು ನನ್ನ ಬಳಿಯಿರಲಿಲ್ಲ. ನನ್ನ ತಾಯಿಯವರು ಅವರ ಶಾಲನ್ನು ಹದಿನಾರು ದೀನಾರ್‌ಗಳಿಗೆ ಒತ್ತೆಯಿರಿಸಿ ಅದರಿಂದ ಉಡುಪು ಖರೀದಿಸಿ ಕೊಟ್ಟರು. ಅದನ್ನು ಧರಿಸಿ ನಾನು ಅಧಿಕಾರಿಯ ಭೇಟಿಗೆ ಹೋದೆ.

★★★★★★

ನಾನು ಕವಿತೆ ಮತ್ತು ಸಾಹಿತ್ಯದಲ್ಲಿಯೇ ಕಾಲ ಕಳೆದೆ. ಇದನ್ನು ನೋಡಿದ ಓರ್ವ ಸಂಬಂಧಿಕರು ನನಗೆ ಉಪದೇಶಿಸಿದರು: ''ಮಗಾ, ಕೇವಲ ಇಷ್ಟು ಕಲಿತರೆ ಸಾಕೇ? ಫಿಕ್ಹ್ ಕಲಿಯ ಬೇಡವೇ? ಅದು ನಿನಗೆ ತಕ್ಕುದಾದ ವಿಷಯವಾಗಿದೆ. ಅದರಲ್ಲಿ ನಿನಗೆ ಉತ್ತಮ ಭವಿಷ್ಯವಿದೆ.''

''ಆಗಲಿ, ಅದಕ್ಕೆ ಯೋಗ್ಯರಾದ ಅಧ್ಯಾಪಕರು ಯಾರಿದ್ದಾರೆ?''

''ಸಂಶಯ ಬೇಡ, ಇಮಾಮ್ ಮಾಲಿಕ್ ಇದ್ದಾರೆ.''

ಆ ಬಳಿಕ ನಾನು ಮಾಲಿಕ್‌ರ ಪ್ರಖ್ಯಾತ 'ಮುವತ್ತಾ' ಗ್ರಂಥವನ್ನು ಶ್ರದ್ಧೆಯಿಂದ ಓದಲಾರಂಭಿಸಿದೆ. ಓರ್ವ ಮಿತ್ರನಿಂದ ಅದನ್ನು ಎರವಲು ಪಡೆದಿದ್ದೆ. ಒಂಭತ್ತು ರಾತ್ರಿಗಳಲ್ಲಿ ನಾನು ಅದನ್ನು ಕಂಠಪಾಠ ಮಾಡಿದೆ. ಅದನ್ನು ಓದಿದ ಬಳಿಕ ಮಾಲಿಕ್‌ರ ಬಗ್ಗೆ ಗೌರವ ಹೆಚ್ಚಿತು.

ಇಮಾಮರ ಶಿಷ್ಯನಾಗಿ ವಿದ್ಯಾರ್ಜನೆ ಮುಂದುವರಿಸಬೇಕೆಂದು ಮನಸ್ಸು ಹಂಬಲಿಸಿತು. ತರುವಾಯ ಅದಕ್ಕಾಗಿ ಪ್ರಯತ್ನಿಸಿದೆ. ಮಕ್ಕಾದ ರಾಜ್ಯಪಾಲರನ್ನು ಭೇಟಿಯಾಗಿ, ಮದೀನಾದ ರಾಜ್ಯಪಾಲರಿಗೂ, ಮಾಲಿಕ್‌ರಿಗೂ ಒಂದೊಂದು ಶಿಫಾರಸು ಪತ್ರವನ್ನು ಪಡೆದುಕೊಂಡೆ.

ತರುವಾಯ ಮದೀನಾಕ್ಕೆ ಹೊರಟೆ. ಅಲ್ಲಿನ ರಾಜ್ಯಪಾಲರನ್ನು ಭೇಟಿಯಾದೆ. ಶಿಫಾರಸು ಪತ್ರವನ್ನು ಒಪ್ಪಿಸಿದೆ. ಅದನ್ನು ಓದಿ ರಾಜ್ಯಪಾಲರು ಹೇಳಿದರು: ''ಇದು ಬಹಳ ಕಷ್ಟದ ಕೆಲಸ. ಮದೀನಾದಿಂದ ನೀವು ಮಕ್ಕಾಕ್ಕೆ ಬರಿಗಾಲಿನಲ್ಲಿ ನಡೆದುಕೊಂಡು ಹೋಗಿರಿ ಎಂದು ಹೇಳಿದರೆ ಹೋಗುತ್ತೇನೆ. ಆದರೆ ಇಮಾಮ್ ಮಾಲಿಕರ ಭೇಟಿಗೆ ಹೋಗುವುದು ಅತ್ಯಂತ ಕಠಿಣ ಕಾರ್ಯ. ಆ ಹೊಸ್ತಿಲಲ್ಲಿ ಹೋಗಿ ತುಂಬಾ ಹೊತ್ತು ಕಾಯಬೇಕು.''

''ನೀವು ಅವರನ್ನು ಇಲ್ಲಿಗೆ ಕರೆಸಬಹುದಲ್ಲವೇ?''

''ಇಲ್ಲಿಗೆ ಕರೆಸುವುದೇ? ಮಾಲಿಕ್ ಅದಕ್ಕೆ ಸಿಗಲಾರರು. ಎಷ್ಟೇ ಕಷ್ಟವಾದರೂ ನಾವೇ ಅಲ್ಲಿಗೆ ಹೋಗಬೇಕು. ಇದೊಂದು ಸತ್ಕರ್ಮವಷ್ಟೆ!''

ಆ ದಿನವೇ ಅಸರ್ ನಮಾಝ್‌ನ ಬಳಿಕ ನಾವು ಹೊರಟೆವು. ಬಾಗಿಲು ಮುಚ್ಚಿತ್ತು. ಅದನ್ನು ತಟ್ಟಿದಾಗ ಓರ್ವ ಹುಡುಗಿಯು ಹೊರಬಂದಳು. ಆಕೆಯೊಡನೆ ರಾಜ್ಯಪಾಲರು ಹೇಳಿದರುತ ಎನೀನು ಹೋಗಿ ನಿನ್ನ ಮಾಲಿಕರೊಡನೆ ಹೇಳು. ನಾನು ರಾಜ್ಯಪಾಲ. ತಮ್ಮ ಭೇಟಿಗೆ ಬಂದಿದ್ದೇನೆ.''

ಹುಡುಗಿ ಹೋಗಿ ತುಂಬಾ ಹೊತ್ತಿನ ಬಳಿಕ ಮರಳಿ ಬಂದಳು.

''ನನ್ನ ಮಾಲಿಕ್‌ರು ನಿಮಗೆ ಸಲಾಮ್ ಹೇಳಿದ್ದಾರೆ. ಏನಾದರೂ ವಿಷಯ ಕೇಳಲಿಕ್ಕಿದ್ದರೆ ಅದನ್ನು ಕಾಗದದಲ್ಲಿ ಬರೆದುಕೊಡುವಂತೆ ಮತ್ತು ಮುಕ್ತ ಮಾತಾಡಲಿಕ್ಕಿದ್ದರೆ ಮರಳಿ ಹೋಗಿ ಸಭೆ ಜರಗುವ ದಿನ ಬರುವಂತೆ ತಿಳಿಸಿದ್ದಾರೆ.''

''ನೀನು ಹೋಗಿ, ನನ್ನ ಬಳಿ ಮಕ್ಕಾದ ರಾಜ್ಯಪಾಲರ ಶಿಫಾರಸ್ಸು ಪತ್ರವಿದೆಯೆಂದು ತಿಳಿಸು. ಬಹಳ ಪ್ರಾಮುಖ್ಯ ವಿಷಯ.''

ಹುಡುಗಿಯು ಮರಳಿದಳು. ತರುವಾಯ ಅವಳು ಒಂದು ಕುರ್ಚಿ ಸಹಿತ ಬಂದಳು.

ಸ್ವಲ್ಪ ಹೊತ್ತಿನ ಬಳಿಕ ಮಾಲಿಕ್‌ರೂ ಬಂದರು. ಆ ಮುಖದಲ್ಲಿ ಎಂಥ ಘನತೆ! ಎಂಥ ಗಾಂಭೀರ್ಯ! ನೀಳ ಗಡ್ಡ! ಸುಂದರ ಉಡುಪು, ಉತ್ತಮ ವಸ್ತ್ರ!

ರಾಜ್ಯಪಾಲರು ಪತ್ರ ಕೊಟ್ಟರು. ಮಾಲಿಕ್ ಓದಿದರು: ''ಪತ್ರ ತರುವ ಈ ಹುಡುಗ ಜಾಣ. ಇವನನ್ನು ಶಿಷ್ಯನಾಗಿ ಸ್ವೀಕರಿಸಬೇಕು. ಇವನಿಗೆ ಹದೀಸ್ ಕಲಿಸಬೇಕು.''

ಇಮಾಮ್ ಮಾಲಿಕರಿಗೆ ಅದು ಮೆಚ್ಚುಗೆಯಾಗಲಿಲ್ಲ. ಅವರು ತಾತ್ಸಾರದಿಂದ ಹೀಗೆಂದರು: ''ವಿಷಯ ಇಲ್ಲಿಯ ತನಕ ತಲುಪಿತೇ? ಪ್ರವಾದಿಯವರ ಹದೀಸ್ ಕಲಿಯುವುದಕ್ಕೆ ಶಿಫಾರಸು ಪತ್ರವೇ?''

ಇದನ್ನು ಕೇಳಿದಾಗ ರಾಜ್ಯಪಾಲರಿಗೆ ಹೆದರಿಕೆಯಾಯಿತು. ಅವರು ಮೌನವಾಗಿ ಕುಳಿತರು.

ಆದರೆ ನಾನು ಧೈರ್ಯ ತಂದುಕೊಂಡು ''ಶೈಖ್! ನನ್ನ ಮೇಲೆ ದಯೆ ತೋರಿರಿ. ನಾನು ಮುತ್ತಲಿಬ್ ಮನೆತನದಿಂದ ಬಂದಿದ್ದೇನೆ'' ಎನ್ನುತ್ತಾ ನನ್ನ ವೃತ್ತಾಂತವನ್ನು ತಿಳಿಸಿದೆ.

ಇಮಾಮರು ಸ್ವಲ್ಪ ಹೊತ್ತು ನನ್ನ ಮುಖವನ್ನೇ ದಿಟ್ಟಿಸಿ ನೋಡಿದರು. ಮುಖ ಲಕ್ಷಣ ನೋಡಿ ತಿಳಿದುಕೊಳ್ಳುವಂತೆ. ಅನಂತರ ಕೇಳಿದರು,

''ಹೆಸರು?''

''ಮುಹಮ್ಮದ್''

''ಮುಹಮ್ಮದ್, ಅಲ್ಲಾಹನಿಗೆ ಹೆದರಿ ಬಾಳಬೇಕು. ಪಾಪ ಮಾಡಬಾರದು. ನಿನಗೆ ಉತ್ತಮ ಭವಿಷ್ಯವಿದೆ. ಈಗ ಹೋಗು, ನಾಳೆ ಪುನಃ ಬಾ. ನಿನಗೆ ಹದೀಸ್ ಓದಿ ತಿಳಿಸಲಿಕ್ಕಾಗಿ ಓರ್ವರನ್ನು ನಿಶ್ಚಯಿಸುತ್ತೇನೆ.''

''ಶೈಖ್,ಅದು ಬೇಕಾಗಿಲ್ಲ, ನಾನೇ ಓದಿಕೊಳ್ಳುತ್ತೇನೆ.''

''ಸರಿ, ಹಾಗೆಯೇ ಆಗಲಿ.''

ಮರುದಿನ ನಾನು ಅವರ ಸಭೆಗೆ ಹೋಗಿ ಅಧ್ಯಯನ ಆರಂಭಿಸಿದೆ.

'ಮುವತ್ತಾ'ವನ್ನು ಕೈಯಲ್ಲಿ ಹಿಡಿದು ಓದಿದೆ. ಅದನ್ನು ತೆರೆಯದೆ ಬಾಯಿ ಪಾಠವಾಗಿಯೇ ಓದಿದೆ. ಸ್ಫುಟವಾಗಿ ಮತ್ತು ವ್ಯಾಕರಣ ನಿಯಮಗಳನ್ನು ಪಾಲಿಸಿದೆ. ಅದನ್ನು ನೋಡಿ ಅವರಿಗೆ ಸಂತೋಷವಾಯಿತು. ನಾನು ಓದುವುದನ್ನು ನಿಲ್ಲಿಸಬೇಕೆಂದು ಭಾವಿಸಿದಾಗ ಅವರು ಹೇಳಿದರು ''ಮಗೂ,ಸಾಕಾಗದು,ಇನ್ನೂ ಸ್ವಲ್ಪ ಓದು.''

ಹೀಗೆ ಕೆಲವೇ ದಿನಗಳಲ್ಲಿ ನಾನು 'ಮುವತ್ತಾ' ಸಂಪೂರ್ಣವಾಗಿ ಓದಿ ಮುಗಿಸಿದೆ.

20ನೇ ವಯಸ್ಸಿನಲ್ಲಿ ಶಾಫಿಈ ಮಾಲಿಕ್‌ರ ಶಿಷ್ಯರಾದರು. ಮಾಲಿಕ್‌ರು ನಿಧನರಾಗುವ ತನಕ ಆ ಸಂಬಂಧ ಮುಂದುವರಿಯಿತು. ಸುದೀರ್ಘ 9 ವರ್ಷ.

ಮಾಲಿಕ್‌ರ ಮರಣದ ಬಳಿಕ ಶಾಫಿಈ ಮದೀನ ತೊರೆದರು. ಅಲ್ಲಿಂದ ಯಮನ್‌ಗೆ ಹೋದರು. ಅಲ್ಲಿನ ರಾಜ್ಯಪಾಲ ಬಹಳ ದುಷ್ಟ ಮತ್ತು ಕ್ರೂರಿಯಾಗಿದ್ದ. ಶಾಫಿಈಯವರು ಆತನ ದುರ್ವರ್ತನೆಗಳನ್ನು ಖಂಡಿಸಿದರು. ಆತನಿಗೆ ಅದು ಹಿಡಿಸಲಿಲ್ಲ.

ಅದೇ ವೇಳೆ ಅಲ್ಲಿನ 9 ಶಿಯಾಗಳು ಸರಕಾರವನ್ನು ಕಟುವಾಗಿ ಟೀಕಿಸುತ್ತಿದ್ದರು. ಇದು ಕೂಡಾ ರಾಜ್ಯಪಾಲನ ನಿದ್ದೆಗೆಡಿಸಿತು.

ಈ ವಿಷಯವನ್ನು ತಿಳಿಸಿ ರಾಜ್ಯಪಾಲರು ಖಲೀಫ ಹಾರೂನ್ ರಶೀದರಿಗೆ ಪತ್ರ ಬರೆದರು, ''ಆ ಶಿಯಾಗಳು ಸರಕಾರದ ವಿರುದ್ಧ ಬಂಡಾಯ ನಡೆಸುವ ಭೀತಿಯಿದೆ. ಇಲ್ಲಿ ಇನ್ನೊಬ್ಬನೂ ಇದ್ದಾನೆ. ಓರ್ವ ಶಾಫಿಈ, ಮುತ್ತಲಿಬ್‌ನವ, ಅವನೂ ಸ್ವೇಚ್ಛಾಚಾರಿ. ನನ್ನನ್ನು ಅನುಸರಿಸುವುದಿಲ್ಲ.''

''ಅವರೆಲ್ಲರನ್ನೂ ಇಲ್ಲಿಗೆ ಕಳಿಸಿರಿ'' ಖಲೀಫರು ಉತ್ತರ ಬರೆದರು.

ರಾಜ್ಯಪಾಲರು ಹಾಗೆಯೇ ಮಾಡಿದರು. ಹತ್ತು ಮಂದಿಯನ್ನು ಖಲೀಫರ ಮುಂದೆ ಹಾಜರು ಪಡಿಸಿದರು. ಆಗ ಖಲೀಫರ ಸನಿಹದಲ್ಲಿ ಮುಹಮದ್ ಬಿನ್ ಹಸನ್‌ರೂ ಇದ್ದರು.

ಖಲೀಫರು ಶಿಯಾಗಳ ತಲೆ ಕಡಿಸಿದರು. ಶಾಫಿಈ ಮುಂದಿನ ಸರದಿಯಲ್ಲಿದ್ದರು. ಮುಹಮ್ಮದ್ ಬಿನ್ ಹಸನ್ ಹೇಳಿದರು: ''ಅಮೀರುಲ್ ಮೂಮಿನೀನ್! ಈ ಮುತ್ತಲಿಬ್‌ನವನ ಬಗ್ಗೆ ಎಚ್ಚರ ವಹಿಸಬೇಕು! ಈತನ ಮಾತಿಗೆ ಮರುಳಾಗಬೇಡಿರಿ. ಆತನ ನಾಲಿಗೆಗೆ ಎಲ್ಲರನ್ನೂ ಮೋಡಿ ಮಾಡುವ ಶಕ್ತಿಯಿದೆ. ಮಹಾ ತಂತ್ರಗಾರ.''

ಅದನ್ನು ಕೇಳಿದಾಗ ಶಾಫಿಈ ಹೇಳಿದರು, ''ಅಮೀರುಲ್ ಮೂಮಿನೀನ್, ನಿಮ್ಮ ಮೇಲೆ ಶಾಂತಿಯಿರಲಿ. ನನಗೆ ಇಲ್ಲಿ ಏನೂ ಮಾಡುವ ಸಾಮರ್ಥ್ಯವಿಲ್ಲವೆಂದು ನಿಮಗೆ ತಿಳಿದಿದೆ. ಇದು ನಿಮ್ಮ ಅರಮನೆ, ನಾನು ಪರದೇಶಿ. ನೀವು ಅಧಿಕಾರದಲ್ಲಿದ್ದೀರಿ. ನೀವು ನನ್ನನ್ನು ಏನು ಬೇಕಾದರೂ ಮಾಡಬಹುದು. ಪ್ರತಿಯಾಗಿ ನನ್ನಿಂದ ಏನು ಮಾಡಲೂ ಸಾಧ್ಯವಿಲ್ಲ.''

ತರುವಾಯ ತಾನು ಸರಕಾರದ ವೈರಿಯಲ್ಲವೆಂದು ಶಾಫಿಈಯವರು ಖಲೀಫರಿಗೆ ಮನವರಿಕೆ ಮಾಡಿಸಿದರು. ಖಲೀಫರು ಅನೇಕ ಪ್ರಶ್ನೆಗಳನ್ನು ಕೇಳಿದರು. ಶಾಫಿಈಯವರು ಅದಕ್ಕೆ ತೃಪ್ತಿಕರ ಉತ್ತರ ಕೊಟ್ಟರು. ಅದರಿಂದ ಶಾಫಿಈಯವರು ಓರ್ವ ಮಹಾ ವಿದ್ವಾಂಸರೆಂದು ಖಲೀಫರಿಗೆ ಮನವರಿಕೆಯಾಯಿತು. ಅವರ ಬಗ್ಗೆ ಗೌರವ ಭಾವನೆ ಮೂಡಿತು. ''ನನಗೆ ಉತ್ತಮ ಉಪದೇಶ ನೀಡಿರಿ'' ಕೊನೆಗೆ ಖಲೀಫರು ವಿನಂತಿಸಿದರು. ಆಗ ಶಾಫಿಈಯವರಿಗೆ ತಾವೂಸುಲ್ ಯಮನಿಯವರ ಒಂದು ಉಪದೇಶ ನೆನಪಾಯಿತು. ಅದನ್ನು ಕೇಳಿ ಖಲೀಫರು ಕಣ್ಣೀರು ಸುರಿಸಿದರು.

ಶಾಫಿಈಯವರು ಹೊರಡುವಾಗ ಖಲೀಫರು ಅವರಿಗೆ 50,000 ದಿರ್ಹಮ್ ಪಾರಿತೋಷಕ ನೀಡಿದರು. ಆದರೆ ಇಮಾಮರು ಅರಮನೆಯಿಂದ ಹೊರಗೆ ಬರುವಾಗ ಅದನ್ನು ಖಲೀಫರ ಪರಿವಾರದವರಿಗೆ ಮತ್ತು ಪರಿಚಾರಕರಿಗೆ ಸಂಪೂರ್ಣವಾಗಿ ದಾನ ಮಾಡಿದರು.

★★★★★★

ರಬೀಅ್ ಬಿನ್ ಸುಲೈಮಾನ್, ಇಮಾಮ್ ಶಾಫಿಈಯವರ ಅಧ್ಯಯನ ಸಭೆಯ ಕುರಿತು ಹೀಗೆ ಬರೆದಿದ್ದಾರೆ: ''ಪ್ರಭಾತ ನಮಾಝ್‌ನ ಬಳಿಕ ದರ್ಸ್ ಆರಂಭವಾಗುತ್ತದೆ. ಮೊದಲು ಕುರ್‌ಆನ್ ಕಲಿಯುವವರ ಸರದಿ. ಸೂರ್ಯೋದಯದೊಂದಿಗೆ ಅದು ಕೊನೆಗೊಳ್ಳುತ್ತಿತ್ತು.

ತರುವಾಯ ಹದೀಸ್ ವಿದ್ಯಾರ್ಥಿಗಳು ಬರುತ್ತಿದ್ದರು. ಶಾಫಿಈಯವರು ಅವರಿಗೆ ಹದೀಸ್ ಕಲಿಸುತ್ತಿದ್ದರು. ಆ ಕುರಿತು ಸಂಶಯಗಳನ್ನು ನಿವಾರಿಸುತ್ತಿದ್ದರು. ಅನಂತರ ಅರಬಿ ಭಾಷೆ, ವ್ಯಾಕರಣ, ಅಲಂಕಾರ ಶಾಸ್ತ್ರ, ಕವಿತೆ ಇತ್ಯಾದಿಗಳನ್ನು ಕಲಿಯುವವರ ಸರದಿ. ಆ ತರಗತಿಯು ಮಧ್ಯಾಹ್ನದ ತನಕ ನಡೆಯುತ್ತಿತ್ತು.''

★★★★★★

ಹುದೈಲಿಯವರ '10,000 ಕವಿತೆಗಳು' ಶಾಫಿಈಯವರಿಗೆ ಬಾಯಿ ಪಾಠವಿತ್ತು. ಹುಮೈದ್ ಬರೆಯುತ್ತಾರೆ: ''ವಿಚಾರವಾದಿಗಳನ್ನು ಈ ರೀತಿ ಎದುರಿಸಬಹುದೆಂದು ನಮಗೆ ತಿಳಿದಿರಲಿಲ್ಲ. ಶಾಫಿಈಯವರ ಆಗಮನದಿಂದ ಆ ಸಮಸ್ಯೆ ನಿವಾರಣೆಯಾಯಿತು. ಅವರು ವಿಚಾರವಾದಿಗಳನ್ನು ಸಮರ್ಥವಾಗಿ ಎದುರಿಸಿದರು.''

★★★★★★

ಓರ್ವರು ಇಮಾಮ್ ಶಾಫಿಈಯವರೊಡನೆ ಯಾವುದೋ ವಿಷಯದಲ್ಲಿ ಧಾರ್ಮಿಕ ತೀರ್ಪು(ಫತ್ವಾ) ಕೇಳಿದರು. ಆದರೆ ತುಂಬಾ ಸಮಯ ಕಳೆದರೂ ಇಮಾಮರು ಯಾವ ಉತ್ತರವನ್ನೂ ಹೇಳಲಿಲ್ಲ.

ಸಭಿಕರು ಕೇಳಿದರು: ಶೈಖ್, ನೀವು ಏನೂ ಹೇಳಲಿಲ್ಲವಲ್ಲಾ?

ಶಾಫಿಈ ಉತ್ತರಿಸಿದರು,

''ಅವರು ಕೇಳಿದ ಪ್ರಶ್ನೆಯ ಬಗ್ಗೆ ಉತ್ತರಿಸುವುದು ಉತ್ತಮವೋ, ಉತ್ತರಿಸದಿರುವುದು ಉತ್ತಮವೋ ಎಂದು ಆಲೋಚಿಸುತ್ತಿದ್ದೆ.''

ಇಮಾಮ್ ಶಾಫಿಈಯವರು ತಮ್ಮ ಪ್ರತಿಯೊಂದು ರಾತ್ರಿಯನ್ನೂ ಮೂರು ಸಮಾನ ಭಾಗಗಳಾಗಿ ವಿಂಗಡಿಸುತ್ತಿದ್ದರು.

ಒಂದು – ಜ್ಞಾನಾರ್ಜನೆಗಾಗಿ

ಎರಡು – ಆರಾಧನೆಗಾಗಿ

ಮೂರು – ನಿದ್ರೆಗಾಗಿ

★★★★★★

ಇಮಾಮ್ ಶಾಫಿಈ 10,000 ದೀನಾರ್‌ಗಳೊಂದಿಗೆ ಮಕ್ಕಾಕ್ಕೆ ಹೊರಟರು. ದಾರಿ ಮಧ್ಯೆ ಒಂದೆಡೆ ಡೇರೆ ಹೂಡಿದಾಗ ಬಟ್ಟೆ ಹಾಸಿ ದೀನಾರ್‌ಗಳನ್ನು ಅದರಲ್ಲಿ ಹಾಕಿದರು. ಅನಂತರ ಅಲ್ಲಿಗೆ ಬಂದವರೆಲ್ಲರಿಗೂ ಅದರಿಂದ ತಲಾ ಒಂದು ಹಿಡಿಯಷ್ಟು ತೆಗೆದು ಕೊಟ್ಟರು.

ಝುಹರ್‌ನ ವೇಳೆಗೆ ದೀನಾರ್‌ಗಳು ಖಾಲಿಯಾಗಿದ್ದುವು. ತರುವಾಯ ಬಟ್ಟೆಯನ್ನು ಕೊಡವಿ ಅಲ್ಲಿಂದ ಪ್ರಯಾಣ ಮುಂದುವರಿಸಿದರು.

★★★★★★

ಇಮಾಮ್ ಶಾಫಿಈ ಮತ್ತು ಶಿಷ್ಯರು ಬೀದಿಯಲ್ಲಿ ಹೋಗುತ್ತಿದ್ದಾಗ ಒಬ್ಬರು ಓರ್ವ ವಿದ್ವಾಂಸರನ್ನು ಬೈಯುತ್ತಿರುವುದು ಕಾಣಿಸಿತು. ಆಗ ಇಮಾಮ್ ಶಾಫಿಈ ಶಿಷ್ಯರೊಡನೆ ಹೇಳಿದರು: ''ನೀವು ಅದಕ್ಕೆ ಕಿವಿಗೊಡಬೇಡಿರಿ. ಅನವಶ್ಯಕವಾಗಿ ಮಾತಾಡುವಂತೆಯೇ ಅದನ್ನು ಆಲಿಸುವುದೂ ತಪ್ಪು, ಆಲಿಸುವವನು ಹೇಳುವವನ ಸಹಭಾಗಿ. ದುಷ್ಟನು ತನ್ನ ಪಾತ್ರೆಯ ಹೊಲಸನ್ನು ನಿಮ್ಮ ಪಾತ್ರೆಗೆ ಹಾಕಲು ಪ್ರಯತ್ನಿಸಬಹುದು. ಆತನ ಮಾತನ್ನು ನಿರ್ಲಕ್ಷಿಸಿರಿ. ಅದೇ ಉತ್ತಮ. ಅವನಂತೆ ಪುನರುಚ್ಚರಿಸುವುದೂ ಅವಿವೇಕತನ.''

★★★★★★

ಇಮಾಮ್ ಶಾಫಿಈ ಒಂದು ಪ್ರಯಾಣ ಹೊರಟು ಹಲವು ದಿನಗಳಾಗಿದ್ದುವು. ದೇಹವು ಬಳಲಿ, ವಸ್ತ್ರವು ಕೊಳೆಯಾಗಿ, ಕೂದಲು ಸುಕ್ಕುಗಟ್ಟಿತ್ತು. ಕ್ಷೌರ ಮಾಡಿಸಲಿಕ್ಕಾಗಿ ಅವರು ಓರ್ವನ ಬಳಿಗೆ ಹೋದರು. ಕ್ಷೌರಿಕನಿಗೆ ಅವರ ಉಡುಪು ಅರೋಚಕವೆನಿಸಿತು. ''ನನಗೆ ಈಗ ಬಿಡುವಿಲ್ಲ, ನೀವು ಬೇರೆಲ್ಲಿಗಾದರೂ ಹೋಗಿ'' ಎಂದು ಆತ ಹೇಳಿದ.

ಕ್ಷೌರಿಕನ ಮಾತುಗಳಿಂದ ಇಮಾಮ್ ಶಾಫಿಈಯವರ ಮನಸ್ಸಿಗೆ ತುಂಬಾ ನೋವಾಯಿತು. ಆದರೆ, ಅವರು ಏನೂ ಮಾತಾಡಲಿಲ್ಲ, ತಾಳ್ಮೆ ವಹಿಸಿದರು. ಜತೆಯಲ್ಲಿದ್ದ ಸಂಗಡಿಗನೊಡನೆ ಕೇಳಿದರು, ''ನಮ್ಮ ಖರ್ಚಿನ ಹಣದಲ್ಲಿ ಬಾಕಿ ಎಷ್ಟಿದೆ?''

''ಹತ್ತು ದೀನಾರ್''

''ಅದನ್ನು ಈ ಕ್ಷೌರಿಕನಿಗೆ ಕೊಡು''

ಸೇವಕ ಹಾಗೆಯೇ ಮಾಡಿದ.

ಇಮಾಮರು ಹಾಡುತ್ತಾ ಅಲ್ಲಿಂದ ಹೊರಟರು. ಅದರ ಸಾರಾಂಶ ಹೀಗಿತ್ತು.

''ನಾನು ಧರಿಸಿದ ವಸ್ತ್ರಗಳನ್ನು ಒಂದು ಪೈಸೆಗೆ ಮಾರಿದರೆ
ಪೈಸೆಗೆ ಹೆಚ್ಚಿನ ಬೆಲೆಯಿರಬಹುದು
ಆದರೆ ಈ ವಸ್ತ್ರದೊಳಗೆ ಒಂದು ಹೃದಯವಿದೆ
ಎಲ್ಲ ಸೃಷ್ಟಿಗಳ ಹೃದಯಗಳಿಗಿಂತ
ಶ್ರೇಷ್ಠವಾದ ಹೃದಯ
ಹಳತಾದರೆ ಖಡ್ಗ ನಿಷ್ಪ್ರಯೋಜಕವಾಗುವುದಿಲ್ಲ
ಅದರಲ್ಲಿ ಹರಿತವಿದ್ದರೆ.''

★★★★★★

ಹಾರಿಸ್ ಬಿನ್ ಲಬೀದ್ ಪರಲೋಕದ ಭಯಾನಕ ರಂಗಗಳ ಬಗ್ಗೆ ಮಾತಾಡುತ್ತಿದ್ದರು. ಅದನ್ನು ಆಲಿಸುತ್ತಿದ್ದ ಇಮಾಮ್ ಶಾಫಿಈ ಹೆದರಿ ನಡುಗುತ್ತಾ ಮೂರ್ಛೆ ಹೋದರು.

ರೋಗ ಪೀಡಿತರಾಗಿ ಮರಣಾಸನ್ನ ಸ್ಥಿತಿಯಲ್ಲಿದ್ದ ಶಾಫಿಈಯವರನ್ನು ಮುಸ್ನಿ ಸಂದರ್ಶಿಸಿದರು. ಕುಶಲ ವಿಚಾರಿಸಿದ ಬಳಿಕ ಇಮಾಮ್ ಹೇಳಿದರು: ''ನಾನು ಲೋಕಕ್ಕೆ ವಿದಾಯ ಹೇಳುತ್ತಿದ್ದೇನೆ, ಮಿತ್ರರಿಂದ ಬೀಳ್ಕೊಡುತ್ತಿದ್ದೇನೆ. ನನ್ನ ಕರ್ಮಗಳ ಫಲವನ್ನು ಅನುಭವಿಸಲಿಕ್ಕಾಗಿ ಹೋಗುತ್ತಿದ್ದೇನೆ, ಮರಣ ಪಾತ್ರೆಯಲ್ಲಿ ಕುಡಿಯುತ್ತಿದ್ದೇನೆ, ಪ್ರಭುವಿನ ಬಳಿಗೆ ಹೋಗುತ್ತಿದ್ದೇನೆ. ನನ್ನ ಆತ್ಮದ ನೆಲೆಯು ಸ್ವರ್ಗವೋ ನರಕವೋ ತಿಳಿದಿಲ್ಲ.''

★★★★★★

ಇಮಾಮ್ ಶಾಫಿಈ ಹೇಳಿದ ಕೆಲವು ಮಾತುಗಳು ಹೀಗಿವೆ:

''ನಾನು ಬಡತನದೊಂದಿಗೆ ಬಹಳಷ್ಟು ಸಾಮರಸ್ಯ ಹೊಂದಿದ್ದೇನೆ. ಎಷ್ಟರವರೆಗೆಂದರೆ, ಆ ಬಗ್ಗೆ ನನಗೆ ಕಿಂಚಿತ್ತೂ ಭಯವಿಲ್ಲ.''

''ನನ್ನ ಜೀವನದಲ್ಲಿ ಮೂರು ಬಾರಿ ಕಡು ಬಡತನ ಅನುಭವಿಸಿದ್ದೇನೆ. ಆಗ ನನ್ನ ಬಳಿಯಿದ್ದ ಎಲ್ಲವನ್ನೂ ಹೆಕ್ಕಿ ತೆಗೆದು ಮಾರಿದೆ. ಮಗಳ ಮತ್ತು ಪತ್ನಿಯ ಒಡವೆ ಕೂಡಾ. ಆದರೆ ಅವುಗಳನ್ನು ನಾನೆಂದೂ ಅಡವಿರಿಸಿರಲಿಲ್ಲ.''

''ನಾನು ಪ್ರಚಾರ ಮಾಡುತ್ತಿರುವ ಶಿಕ್ಷಣವು ಜನರಿಗೆ ಉಪಯುಕ್ತವಾಗಬೇಕೆಂದು ನಾನು ಬಯಸುತ್ತೇನೆ. ಅದರಿಂದ ನನಗೇನಾದರೂ ಲಾಭವಾಗಬೇಕೆಂಬ ಬಯಕೆಯಿಲ್ಲ.''

''ಯಾರೊಡನೆ ಏನಾದರೂ ಮಾತಾಡುವಾಗ ಅವರು ಉತ್ತಮರಾಗಬೇಕು, ಸರಿಯಾದ ಹಾದಿಯಲ್ಲಿ ನಡೆಯಬೇಕು. ಅವರಿಗೆ ಅಲ್ಲಾಹನ ಸಂರಕ್ಷಣೆ ದೊರೆಯಬೇಕೆಂಬುದೇ ನನ್ನ ಏಕೈಕ ಉದ್ದೇಶ.''

''ಪ್ರತಿಸ್ಪರ್ಧಿಯು ಸೋಲಬೇಕೆಂದು ಬಯಸಿ ನಾನು ಎಂದೂ ವಾಗ್ವಾದ ನಡೆಸಿಲ್ಲ.''

''ನನ್ನ ಕೃತಿಯಲ್ಲಿ ಪ್ರವಾದಿಚರ್ಯೆಗೆ ವಿರುದ್ಧವಾಗಿರುವುದನ್ನು ಕಂಡರೆ ಪ್ರವಾದಿ ಚರ್ಯೆಯನ್ನು ಅಂಗೀಕರಿಸಬೇಕು. ನನ್ನ ಅಭಿಪ್ರಾಯವನ್ನು ತಿರಸ್ಕರಿಸಬೇಕು.''

''ನಾನು ಹೊಟ್ಟೆ ತುಂಬಾ ಉಣ್ಣದೆ 16 ವರ್ಷವಾಯಿತು. ಹೊಟ್ಟೆ ತುಂಬಾ ಉಂಡರೆ ತುಂಬಾ ದೋಷವಿದೆ. ದೇಹದ ತೂಕ ಹೆಚ್ಚುತ್ತದೆ. ಮನಸ್ಸು ಭಾರವಾಗುತ್ತದೆ. ಬುದ್ಧಿ ಮಂದವಾಗುತ್ತದೆ. ನಿದ್ದೆ ಬರುತ್ತದೆ. ಆರಾಧನೆಯಲ್ಲಿ ಆಸಕ್ತಿ ಕಡಿಮೆಯಾಗುತ್ತದೆ.''

''ನೀನು ಮಾಡುವ ಕಾರ್ಯದಲ್ಲಿ ನಿನಗೆ ಅಹಂಕಾರ ಭಾವ ತಲೆದೋರುವ ಆಶಂಕೆಯಿದ್ದರೆ ಕೆಳಗಿನ ವಿಷಯಗಳ ಬಗ್ಗೆ ಚಿಂತಿಸಬೇಕು. ನೀನು ಬಯಸುವ ದೇವ ಸಂಪ್ರೀತಿ, ನೀನು ನಿರೀಕ್ಷಿಸುವ ಪ್ರತಿಫಲ, ನೀನು ಹೆದರುವ ಶಿಕ್ಷೆ, ನೀನು ಸಂತೋಷದಿಂದ

ಜ್ಞಾಪಿಸುವ ನಿನ್ನ ಆರೋಗ್ಯ, ಭಯದಿಂದ ಸರಿಸುವ ದುರಂತ ಇವುಗಳ ಪೈಕಿ ಯಾವುದಾದರೊಂದು ವಿಷಯದ ಬಗ್ಗೆ ಆಲೋಚಿಸಿದರೆ ನಿನ್ನ ಕರ್ಮವು ತೀರಾ ತುಚ್ಛವೆಂದು ಮನವರಿಕೆಯಾಗುವುದು.''

''ನಾನು ಇಹಲೋಕವನ್ನೂ ಅಲ್ಲಾಹನನ್ನೂ ಏಕಪ್ರಕಾರ ಪ್ರೀತಿಸುವೆನೆಂದು ಹೇಳುವಾತನು ಶುದ್ಧ ಸುಳ್ಳು ಹೇಳುತ್ತಾನೆ.''

ಕುಶಲ ವಿಚಾರಿಸಿದ ಓರ್ವರೊಡನೆ ಇಮಾಮ್ ಶಾಫಿಈ ಹೇಳಿದರು: ''ನನ್ನ ಅವಸ್ಥೆ ಏನೆಂದು ಹೇಳಲಿ. ಎಂಟು ಮಂದಿ ಎಂಟು ಬೇಡಿಕೆಗಳಿಂದ ನನ್ನನ್ನು ಸುತ್ತುವರಿದಿದ್ದಾರೆ. ಅಲ್ಲಾಹನ ಗ್ರಂಥ-ನಾನು ಅದರಂತೆ ಬಾಳಬೇಕೆಂಬ ಬೇಡಿಕೆಯಿಂದ, ಪ್ರವಾದಿಚರ್ಯೆ-ನಾನು ಅದನ್ನು ಅನುಗಮಿಸಬೇಕೆಂದು, ನನ್ನ ಮನಸ್ಸು ಅದರ ಬಯಕೆಗಳನ್ನು ಈಡೇರಿಸಲಿಕ್ಕಾಗಿ, ನನ್ನ ಪಿಶಾಚಿ-ನಾನು ಅಲ್ಲಾಹ್ ಮತ್ತು ಪ್ರವಾದಿಯನ್ನು ಧಿಕ್ಕರಿಸಬೇಕೆಂದು, ನನ್ನ ಕುಟುಂಬಅದಕ್ಕೆ ಆಹಾರ ಸಂಪಾದಿಸಿ ಕೊಡಬೇಕೆಂದು, ನನ್ನ ದೇಹ-ದೊಡ್ಡ ದೊಡ್ಡ ಇಚ್ಛೆಗಳಿಗಾಗಿ, ಕಾಲ-ಅನೇಕ ಬೇಡಿಕೆಗಳೊಂದಿಗೆ, ಮರಣದ ದೇವಚರ-ನನ್ನ ಆತವನ್ನು ಹಿಡಿಯಲು ಸಿದ್ಧವಾಗಿ.''

ಇಮಾಮ್ ಅಹ್ಮದ್ ಬಿನ್ ಹಂಬಲ್ ಹೇಳುತ್ತಾರೆ: 40 ವರ್ಷಗಳಿಂದ ನಾನು ಎಲ್ಲ ನಮಾಝ್‌ನ ಬಳಿಕವೂ ಇಮಾಮ್ ಶಾಫಿಈಯವರಿಗಾಗಿ ಪ್ರಾರ್ಥಿಸುತ್ತಿದ್ದೇನೆ.

''ಅಪ್ಪಾ, ಈ ಶಾಫಿಈ ಎಂದರೆ ಯಾರು? ಎಲ್ಲ ನಮಾಝ್‌ನ ಬಳಿಕವೂ ನೀವು ಅವರಿಗಾಗಿ ಪ್ರಾರ್ಥಿಸುತ್ತಿದ್ದೀರಲ್ಲವೇ?'' ಇಮಾಮ್ ಅಹ್ಮದ್‌ರ ಪುತ್ರ ಅಚ್ಚರಿ ಪ್ರಕಟಿಸಿದ.

''ಮಗೂ, ಈ ಪ್ರಪಂಚದಲ್ಲಿ ಸೂರ್ಯಕ್ಕೆ ಇರುವ ಸ್ಥಾನವು ಜನರ ಮಧ್ಯೆ ಶಾಫಿಈಯವರಿಗೆ ಇದೆ.''

''ಪ್ರತಿಯೊಂದು ಶತಮಾನದಲ್ಲಿಯೂ ಇಸ್ಲಾಮನ್ನು ಪುನರುದ್ಧರಿಸುವ ನವೋತ್ಥಾನ ನಾಯಕ ಬರುತ್ತಾರೆ.'' ಎಂಬ ಪ್ರವಾದಿ ವಚನವಿದೆ. ಅದರ ವ್ಯಾಖ್ಯಾನದಲ್ಲಿ ಇಮಾಮ್ ಅಹ್ಮದ್ ಹೇಳುತ್ತಾರೆ: ''ಒಂದನೇ ಶತಮಾನದಲ್ಲಿ ಉಮರ್ ಬಿನ್ ಅಬ್ದುಲ್ ಅಝೀಝ್, ಎರಡನೆಯದರಲ್ಲಿ ಶಾಫಿಈ ಆಗಿದ್ದಾರೆ.''

ಅಬೂ ಸೌರ್ ಹೇಳುತ್ತಾರೆ: ''ಇಮಾಮ್ ಶಾಫಿಈಯವರಂಥ ಮಹಾ ವಿದ್ವಾಂಸರನ್ನು ನಾವು ಯಾರೂ ನೋಡಿಲ್ಲ.''

ಖ್ಯಾತ ಅರಬಿ ಸಾಹಿತಿ ಜಾಹಿಝ್ ಹೇಳುತ್ತಾರೆ ''ಉನ್ನತ ಪಾಂಡಿತ್ಯ ಗಳಿಸಿದ ಅನೇಕ ವಿದ್ವಾಂಸರ ಗ್ರಂಥಗಳನ್ನು ನಾನು ಪರಿಶೀಲಿಸಿದ್ದೇನೆ. ಆ ಪೈಕಿ ಶಾಫಿಈಯವರ ಗ್ರಂಥಗಳೇ ಉತ್ಕೃಷ್ಟವಾಗಿದ್ದುವು. ಅದರ ಭಾಷೆಯು ಮಣಿಗಳನ್ನು ಪೋಣಿಸಿದ ಮಾಲೆಯಂತೆ ಅತಿ ಮನೋಹರವಾಗಿದೆ.''

ರಬೀಅ್ ಬಿನ್ ಸುಲೈಮಾನ್ ಹೇಳುತ್ತಾರೆ: ''ಶಾಫಿಈಯವರ ಗ್ರಂಥಗಳನ್ನು ಓದಿದರೆ ಯಾರೂ ಅಚ್ಚರಿ ಪಡಬಹುದು. ಅವು ಅಷ್ಟೊಂದು ಸುಂದರವಾಗಿವೆ. ಸಾಹಿತ್ಯದಲ್ಲಿ ಉನ್ನತ ಮಟ್ಟವನ್ನು ಹೊಂದಿವೆ. ನಮ್ಮೊಂದಿಗೆ ಸಂವಾದ ನಡೆಸುವಾಗ ಶಾಫಿಈ ಬಳಸುವ ಸಾಹಿತ್ಯ ಭಾಷೆಯಲ್ಲಿ ಗ್ರಂಥ ಬರೆದರೆ ಅದು ಹೆಚ್ಚಿನವರಿಗೆ ಅರ್ಥವಾಗಲಾರದು.''

''ಶಾಫಿಈಯವರ ಮರಣದ ಬಳಿಕ ಒಂದು ದಿನ ನಾವು ಅವರ ಅಧ್ಯಯನ ಕೇಂದ್ರದಲ್ಲಿ ಸೇರಿದ್ದೆವು. ಒಬ್ಬ ಹಳ್ಳಿಗನು ಬಂದು ಸಲಾಮ್ ಹೇಳಿದ. ತರುವಾಯ ಕೇಳಿದ: ''ಇಲ್ಲಿನ ಸೂರ್ಯ ಮತ್ತು ಚಂದ್ರವಾಗಿದ್ದ ಮಹಾನುಭಾವರು ಎಲ್ಲಿದ್ದಾರೆ?''

''ಪರಲೋಕ ಸೇರಿದರು.''

ಅದನ್ನು ಕೇಳಿದಾಗ ಅವರು ರೋದಿಸಿದರು. ''ಆ ಮಹಾತ್ಮರನ್ನು ಅಲ್ಲಾಹ್ ಅನುಗ್ರಹಿಸಲಿ. ಅವರು ಎಷ್ಟೊಂದು ಪ್ರತಿಭಾವಂತ ವಿದ್ವಾಂಸರಾಗಿದ್ದರು! ಎಂತಹ ಮಾತುಗಾರರಾಗಿದ್ದರು. ಪ್ರತಿಸ್ಪರ್ಧಿಯನ್ನು ನಿರುತ್ತರಗೊಳಿಸುವ ಅವರ ಸಾಮರ್ಥ್ಯ ಅಪಾರ! ಇಮಾಮ್ ಶಾಫಿಈಯವರ ಮರಣವಾರ್ತೆ ಕೇಳಿದಾಗ ಸುಫ್ಯಾನ್ ಬಿನ್ ಉಯೈನಾರ ಪ್ರತಿಕ್ರಿಯೆ ಹೀಗಿತ್ತು: ''ಅವರು ಹೋಗಿ ಬಿಟ್ಟರೇ! ಹಾಗಾದರೆ ಈ ಕಾಲದ ಮಹೋನ್ನತರು ಮುಗಿದು ಹೋದರು.''



# ಅಹ್ಮದ್ ಬಿನ್ ಹಂಬಲ್ (ರ)
## (ಹಿಜರಿ. 164-241/ಕ್ರಿ.ಶ. 780-855)

ಹಂಬಲಿ ಮದ್ಹಬ್‌ನ ನಿರ್ಮಾಪಕ. ಹದೀಸ್ ಮತ್ತು ಕರ್ಮಶಾಸ್ತ್ರದಲ್ಲಿ ಮಹಾ ವಿದ್ವಾಂಸ. ಜನನ ಬಗ್ದಾದ್‌ನಲ್ಲಿ. ಅವರ ವಂಶ ಪರಂಪರೆಯು ಪ್ರವಾದಿ ಇಬ್ರಾಹೀಮ್‌ರಿಗೆ ತಲುಪುತ್ತದೆ. ಅಹ್ಮದ್‌ರ ಮೂರನೇ ವಯಸ್ಸಿನಲ್ಲಿ ತಂದೆ ತೀರಿಕೊಂಡರು. ಚಿಕ್ಕಂದಿನಲ್ಲಿಯೇ ಕುರ್‌ಆನ್ ಕಂಠಪಾಠ ಮಾಡಿದರು. ಹದೀಸ್ ಕಲಿಯಲಿಕ್ಕಾಗಿ ಸಿರಿಯ, ಯಮನ್, ಅರೇಬಿಯಾ ಎಂಬೀ ರಾಷ್ಟ್ರಗಳಿಗೆ ಭೇಟಿ ನೀಡಿದರು. ಇಮಾಮ್ ಶಾಫಿಈ ಖ್ಯಾತ ಹನಫೀ ವಿದ್ವಾಂಸರಾದ ಅಬೂ ಯೂಸುಫ್, ಹುಶೈಮ ಬಿನ್ ಬಶೀರ್, ಅಬ್ದುರ್ರಹಾನ್ ಬಿನ್ ಮಹ್ದಿ, ಫಕೀಉಬ್ನು ಜರ್‍ರಾಹ್, ಸುಫ್ಯಾನ್ ಬಿನ್ ಉಯೈನಾ ಅವರ ಪ್ರಮುಖ ಗುರುಗಳಾಗಿದ್ದರು.

ಅರಬಿ ಭಾಷೆಯ ಹೊರತು ಫಾರ್ಸಿಯನ್ನು ಬಲ್ಲವರಾಗಿದ್ದರು. ವಿಶೇಷ ದೃಢಚಿತ್ತತೆ, ಶೌರ್ಯ ಮತ್ತು ಜ್ಞಾಪಕ ಶಕ್ತಿಯು ಅವರಿಗೆ ವರದಾನವಾಗಿತ್ತು. ಹತ್ತು ಲಕ್ಷ ಹದೀಸ್‌ಗಳನ್ನು ಕಂಠಪಾಠ ಮಾಡಿದ್ದರು. ಅಹ್ಲು ಸುನ್ನತಿ ವಲ್ ಜಮಾಅತ್‌ನ ಗುರುಗಳೆಂದು ಪ್ರಸಿದ್ಧರಾಗಿದ್ದರು.

ತಾನು ಮನಗಂಡ ಸತ್ಯವನ್ನು ಯಾರ ಮುಂದೆ ಹೇಳಲೂ ಅವರು ಹಿಂಜರಿಯುತ್ತಿರಲಿಲ್ಲ. ಅದಕ್ಕಾಗಿ ಜೈಲು ಶಿಕ್ಷೆಯೂ ಸೇರಿದಂತೆ ನಾನಾ ರೀತಿಯ ಹಿಂಸೆಯನ್ನು ಅನುಭವಿಸಿದ್ದರು. ತಮ ಕರ್ಮಶಾಸ್ತ್ರೀಯ ದೃಷ್ಟಿಕೋನವನ್ನು ದಾಖಲಿಸಲು ಅವರು ಯಾರಿಗೂ ಅನುಮತಿಸುತ್ತಿರಲಿಲ್ಲ. ಅವರ ದೃಷ್ಟಿಕೋನ ಮತ್ತು ಅಭಿಪ್ರಾಯಗಳನ್ನು ಶಿಷ್ಯರೇ ಒಂದು ಮದ್ಹಬ್ ಆಗಿ ರೂಪಿಸಿದ್ದರು.

ಆರ್ಥಿಕವಾಗಿ ಬಹಳ ಕಷ್ಟದಲ್ಲಿದ್ದರು. ಕೂಲಿ ಕೆಲಸ ಮಾಡಿ ಬದುಕುತ್ತಿದ್ದರು. ಮೂವರು ಪತ್ನಿಯರಲ್ಲಿ 6 ಮಂದಿ ಮಕ್ಕಳಿದ್ದರು. ಅವರ ಪ್ರಮುಖ ಶಿಷ್ಯರಲ್ಲಿ ಇಸ್ಹಾಕ್ ಬಿನ್ ಮನ್ಸೂರ್ ಅಲ್ ಕೌಸಜ್, ಅಬೂಬಕರ್ ಅಲ್ ಅತ್ರಮ್, ಹಂಬಲ್ ಬಿನ್ ಇಸ್ಹಾಕ್, ಅಬ್ದುಲ್ ಮಲಿಕ್

ಅಲ್ ಮೈಮೂನಿ, ಅಬೂ ಬಕ್ರ್ ಅಲ್ ಮರ್ವಸಿ, ಅಬೂ ದಾವೂದ್ ಅಸ್ಸಿಜಿಸ್ತಾನಿ, ಹರ್‌ಬು ಬಿನ್ ಇಸಾಈಲ್ ಅಲ್ ಕಿರ್ಮಾನಿ, ಇಬ್ರಾಹೀಮ್ ಬಿನ್ ಇಸ್ಹಾಕ್ ಅಲ್ ಹರ್ಬೀ ಸೇರಿದ್ದಾರೆ. ಇವರ ಹೊರತು ಅವರ ಪುತ್ರರಾದ ಸಾಲಿಹ್ ಮತ್ತು ಅಬ್ದುಲ್ಲಾರೂ ಪ್ರಸಿದ್ಧ ಶಿಷ್ಯರಲ್ಲಿ ಸೇರಿದ್ದಾರೆ. ಇಮಾಮ್ ಅಹ್ಮದರಿಂದ ಹದೀಸ್ ಉದ್ಧರಿಸಿದವರಲ್ಲಿ ಬುಖಾರಿ, ಮುಸ್ಲಿಮ್ ಮತ್ತು ಅಬೂ ದಾವೂದ್‌ರಂಥ ಗಣ್ಯರೂ ಸೇರಿದ್ದಾರೆ.

'ಅಲ್ ಮುಸ್ನದ್'(ಹದೀಸ್ ಸಮಾಹಾರ) ಇಮಾಮ್ ಅಹ್ಮದ್‌ರ ಪ್ರಧಾನ ಕೃತಿಯಾಗಿದೆ. ಇತರ ಗ್ರಂಥಗಳು: ಕಿತಾಬುಲ್ ವರಅ್, ಕಿತಾಬುಸುನ್ನಃ, ಅರ್‍ರದ್ದು ಅಲಲ್ ಜಾಹಿಲಿಯ್ಯಾ ವಸ್ಸನಾದಿಕ, ಅಲ್ ಮನಾಸಿಕುಲ್ ಕಬೀರ್, ಅಲ್ ಮನಾಸಿಕುಸ್ಸಗೀರ್, ಕಿತಾಬುಸ್ಸಲಾತ್.

75ನೇ ವಯಸ್ಸಿನಲ್ಲಿ ಬಗ್ದಾದ್‌ನಲ್ಲಿ ನಿಧನರಾದರು.

ಇಮಾಮ್ ಅಹದ್ ಹೇಳುತ್ತಾರೆ: ವಿದ್ಯೆ ಮತ್ತು ಹದೀಸಿಗಾಗಿ ನಾನು ಅನೇಕ ದೇಶಗಳಲ್ಲಿ ಸಂಚರಿಸಿದ್ದೇನೆ. ಅಲ್ ಮಗ್ರಿಬ್, ಅಲ್ಜೀರಿಯ, ಮಕ್ಕಾ, ಮದೀನ, ಹಿಜಾಝ್, ಯಮನ್, ಬಸ್ರಾ, ಕೂಫಾ, ಪರ್ಶಿಯ, ಖುರಾಸಾನ್, ಶಮಾತ್, ತೀರ ಪ್ರದೇಶಗಳು, ಗಡಿ ಪ್ರದೇಶಗಳು, ಪರ್ವತ ಪ್ರದೇಶಗಳು ಹೀಗೆ ಅನೇಕ ಕಡೆಗಳಿಗೆ ಹೋಗಿದ್ದೇನೆ. ಕೂಫಾಕ್ಕೆ ಹೋಗಿದ್ದಾಗ ರಯ್ಯ್‌ನ-ಟೆಹ್ರಾನ್‌ನ ಜರೀರ್ ಬಿನ್ ಅಬ್ದುಲ್ ಹಮೀದ್‌ರನ್ನು ಭೇಟಿಯಾಗಬೇಕೆಂಬ ಹಂಬಲವಿತ್ತು. ಜತೆಯಲ್ಲಿದ್ದ ಕೆಲವರು ಅಲ್ಲಿಗೆ ಹೋದರು. ಪ್ರಯಾಣದ ಖರ್ಚಿಗೆ ಹಣದ ಕೊರತೆಯಿಂದ ನನಗೆ ಸಾಧ್ಯವಾಗಲಿಲ್ಲ. 90 ದಿರ್ಹಮ್ ಇರುತ್ತಿದ್ದರೆ ನಾನೂ ಹೋಗುತ್ತಿದ್ದೆ.

★★★★★★

ಇಮಾಮ್ ಅಹ್ಮದರು, ಇಮಾಮ್ ಶಾಫಿಈಯವರ ನಿಕಟ ಶಿಷ್ಯರಲ್ಲಿ ಓರ್ವರಾಗಿದ್ದರು. ಬಗ್ದಾದ್‌ನಲ್ಲಿ ಅಹ್ಮದರು ಶಾಫಿಈಯವರ ಜತೆ ನಿಂತು ಶಿಕ್ಷಣ ಪಡೆದರು. ಶಾಫಿಈಯವರು ಈಜಿಪ್ಟ್‌ಗೆ ಹೋಗುವ ತನಕ ಆ ಸಂಬಂಧ ಮುಂದುವರಿಯಿತು. ಶಾಫಿಈ ಹೇಳುತ್ತಾರೆ: ಬಗ್ದಾದ್‌ನಲ್ಲಿ ಅಹ್ಮದರಿಗಿಂತ ದೊಡ್ಡ ಭಕ್ತ ಮತ್ತು ಕರ್ಮಶಾಸ್ತ್ರಪಂಡಿತರು ಯಾರೂ ಇರಲಿಲ್ಲ.

★★★★★★

ಅಹ್ಮದರು ಹಜ್ಜ್‌ಗೆ ಹೊರಟಿದ್ದರು. ಮಕ್ಕಾದಲ್ಲಿ ಪ್ರಮುಖ ಹದೀಸ್ ಪಂಡಿತರಾದ ಅಬ್ದುರ್‍ರಝಾಕ್‌ರನ್ನು ಭೇಟಿಯಾದರು. ಅಲ್ಲಿಯೇ ಅಬ್ದುರ್‍ರಝಾಕ್‌ರಿಂದ ಹದೀಸ್ ಕಲಿಯಬಹುದಾಗಿತ್ತು.

ಆದರೆ ಅವರು ಹಾಗೆ ಮಾಡಲಿಲ್ಲ. ಅದರ ಬದಲಾಗಿ ಹಜ್ಜ್‌ನ ಬಳಿಕ ಬಹು ದೂರ ಪ್ರಯಾಣಿಸಿ ಯಮನ್‌ಗೆ ಹೋಗಿ ಅಬ್ದುರ್‍ರಝಾಕ್‌ರ ಅಧ್ಯಯನ ಕೇಂದ್ರದಲ್ಲಿ ಅವರಿಂದ ಹದೀಸ್ ಕಲಿತರು.

ಖರ್ಚಿಗೆ ಹಣ ಸಾಕಾಗದೆ ಆ ಪ್ರಯಾಣವನ್ನು ಪೂರ್ಣಗೊಳಿಸಲಿಕ್ಕಾಗಿ ಹಮಾಲಿಯ ಕೆಲಸ ಮಾಡಬೇಕಾಯಿತು. ಯಮನ್‌ನಲ್ಲಿಯೂ ಬಹಳ ಕಷ್ಟದಿಂದ ಎರಡು ವರ್ಷ ಕಳೆದರು. ಉಸ್ತಾದ್ ಅಬ್ದುರ್ರಝಾಕ್‌ರಿಂದಲೂ ನೆರವು ಪಡೆಯಲಿಲ್ಲ.

ಒಮ್ಮೆ ಅಹ್ಮದರು ನಮಾಝ್‌ನ ನೇತೃತ್ವ ವಹಿಸಿದ್ದಾಗ ಮರೆವು ಸಂಭವಿಸಿತು. ನಮಾಝ್‌ನ ಕ್ರಮ ತಪ್ಪಿತು. ಅವರ ಹಿಂದೆ ನಮಾಝ್ ಮಾಡುವ ಜನರಲ್ಲಿ ಗುರುಗಳಾದ ಅಬ್ದುರ್ರಝಾಕರೂ ಇದ್ದರು. ''ಏನಾಯಿತು?'' ಅಬ್ದುರ್ರಝಾಕ್ ಕೇಳಿದರು.

''ತೀರಾ ಬಳಲಿದ್ದೇನೆ. ಆಹಾರ ಸೇವಿಸದೆ ಮೂರು ದಿನಗಳಾದುವು.'' ಅಹ್ಮದರು ನಿಜ ಸ್ಥಿತಿಯನ್ನು ಬಯಲುಗೊಳಿಸಬೇಕಾಯಿತು.

★★★★★★

ಅಹ್ಮದರು ಮಕ್ಕಾದಲ್ಲಿ ಸುಫ್‌ಯಾನ್ ಬಿನ್ ಉಯೈನಾರಿಂದ ಹದೀಸ್ ಕಲಿಯುತ್ತಿದ್ದ ಕಾಲ. ಒಂದು ದಿನ ಅಹ್ಮದರ ವಸ್ತ್ರ ಕಳವಾಯಿತು. ಹಲವು ದಿನಗಳ ಕಾಲ ಅವರು ಮದರಸಕ್ಕೆ ಗೈರು ಹಾಜರಾದಾಗ ಸಹಪಾಠಿಯು ಹುಡುಕುತ್ತಾ ಮನೆಗೆ ಹೋದರು. ಅಹ್ಮದರು ಬಾಗಿಲು ಮುಚ್ಚಿ ಕೋಣೆಯೊಳಗೆ ಕುಳಿತಿದ್ದರು. ಆ ಬಗ್ಗೆ ವಿಚಾರಿಸಿದಾಗ ಬಟ್ಟೆ ಅಪಹರಣವಾದ ವಿಷಯ ತಿಳಿಯಿತು.

ಸಹಪಾಠಿ ಹೇಳಿದರು: ''ನನ್ನ ಬಳಿ ಹಣವಿದೆ. ದಾನ ಅಥವಾ ಸಾಲವಾಗಿ ನೀಡುತ್ತೇನೆ.''

ಅಹ್ಮದರು ಎರಡಕ್ಕೂ ಒಪ್ಪಲಿಲ್ಲ.

''ಹಾಗಾದರೆ ನೀವು ನನಗೆ ಏನಾದರೂ ಪ್ರಬಂಧದ ಪ್ರತಿ ಮಾಡಿಕೊಟ್ಟರೆ ಸಾಕು. ನಾನು ಕೂಲಿ ಕೊಡುತ್ತೇನೆ.''

ಈ ಸಲಹೆಯನ್ನು ಅವರು ಸ್ವೀಕರಿಸಿದರು.

★★★★★★

ಅಹ್ಮದರ ಓರ್ವ ಸಮಕಾಲೀನರು ವ್ಯಥೆಪಡುತ್ತಾರೆ: ''ಮಕ್ಕಳ ಶಿಕ್ಷಣಕ್ಕೆ ನಾನು ಧಾರಾಳ ಹಣ ಖರ್ಚುಮಾಡಿದೆ. ಆದರೆ ಅದರಿಂದ ಯಾವ ಪ್ರಯೋಜನವೂ ಆಗಲಿಲ್ಲ. ಅಹ್ಮದರನ್ನು ನೋಡಿ ಕಲಿಯಬೇಕು. ಅನಾಥ ಹುಡುಗ! ಆದರೂ ಎಂಥ ಗುರುಭಕ್ತಿ! ಎಷ್ಟೊಂದು ಮರ್ಯಾದೆ! ಎಷ್ಟೊಂದು ಶಿಸ್ತು!''

★★★★★★

ಹದೀಸ್‌ಗಳನ್ನು ಬರೆದ ಕಡತಗಳನ್ನು ಹೊತ್ತು ಇಮಾಮ್ ಅಹ್ಮದರು ಪ್ರಯಾಣಿಸುತ್ತಿರುವುದನ್ನು ನೋಡಿ ಓರ್ವ ಮಿತ್ರರು ಕೇಳಿದರು: ''ಒಮ್ಮೆ ಕೂಫಾಕ್ಕೆ, ಅನಂತರ ಬಸ್ರಾಕ್ಕೆ! ಹೀಗೆ ಎಷ್ಟು ಕಾಲ ಈ ಯಾತ್ರೆ!?

ಮತ್ತೊಬ್ಬರು ಕೇಳಿದರು: ''ಶೈಖ್, ನೀವು ಧಾರಾಳ ವಿದ್ಯೆ ಗಳಿಸಿದ್ದೀರಲ್ಲವೇ? ಮುಸ್ಲಿಮರ ಇಮಾಮ್ ಆಗಿದ್ದೀರಿ! ಇನ್ನೂ ಯಾಕೆ ಕಷ್ಟಪಡುತ್ತಿರುವಿರಿ?''

ಇಮಾಮ್ ಉತ್ತರಿಸಿದರು: ''ಗೋರಿ ತಲಪುವ ತನಕ ವಿದ್ಯಾರ್ಜನೆಯ ಈ ಪ್ರಯಾಣ ಮುಂದುವರಿಯುತ್ತದೆ.''

★★★★★★

ಇಮಾಮ್ ಅಹ್ಮದರು ನಿತ್ಯ ಖರ್ಚಿಗೆ ಮೂರು ವಿಧಾನಗಳನ್ನು ಅನುಸರಿಸುತ್ತಿದ್ದರು. ಕೂಲಿಕೆಲಸ, ಬರಹ, ಕೊಯ್ಲಿನ ಕಾಲದಲ್ಲಿ ರೈತರು ಬಿಟ್ಟು ಹೋದ ಬೆಳೆಯ ಚೂರುಗಳನ್ನು ಹೆಕ್ಕುವುದು.

★★★★★★

ಒಮ್ಮೆ ಇಮಾಮ್ ಅಹ್ಮದರಿಗೆ ಹಸಿವೆ ನಿವಾರಿಸಲು ಏನೂ ದೊರೆಯಲಿಲ್ಲ. ಮೂರು ದಿನ ನಿರಂತರ ಹಸಿವೆಯಿಂದ ಬಳಲಿದರು. ಕೊನೆಗೆ ಅವರು ಓರ್ವ ಮಿತ್ರನಿಂದ ಸ್ವಲ್ಪ ಗೋಧಿ ಪಡೆದರು.

ಸಂಬಂಧಿಕರು ಬೇಗನೆ ರೊಟ್ಟಿ ತಯಾರಿಸಿ ಕೊಟ್ಟರು. ಅಹ್ಮದರ ಪುತ್ರ ಸಾಲಿಹ್‌ರ ಮನೆಯ ಒಲೆಯಲ್ಲಿ ಬೆಂಕಿ ಉರಿಯುತ್ತಿತ್ತು. ಅಲ್ಲಿ ರೊಟ್ಟಿ ಸುಡಲಾಗುತ್ತಿತ್ತು.

ರೊಟ್ಟಿಯನ್ನು ಅಹ್ಮದರಿಗೆ ಬಡಿಸಲಾಯಿತು. ಇಷ್ಟು ಬೇಗ ರೊಟ್ಟಿ ಸಿದ್ಧವಾಯಿತೇ? ಅವರು ಆಶ್ಚರ್ಯ ಪ್ರಕಟಿಸಿದರು.

ಸಾಲಿಹ್‌ರ ಮನೆಯಲ್ಲಿ ತಯಾರಿಸಲಾಯಿತೆಂದು ಮನೆಯವರು ತಿಳಿಸಿದರು.

ಅದನ್ನು ಕೇಳಿದ ಕೂಡಲೇ ಅವರು ರೊಟ್ಟಿ ತಿನ್ನದೆ ಅಲ್ಲಿಂದ ಎದ್ದು ಹೋದರು. ತನ್ನ ಮನೆಯಿಂದ ಸಾಲಿಹ್‌ರ ಮನೆಗಿರುವ ಬಾಗಿಲನ್ನು ಮುಚ್ಚಿಬಿಟ್ಟರು.

ಸಾಲಿಹ್‌ರು ಸುಲ್ತಾನರಿಂದ ಪಾರಿತೋಷಕವನ್ನು ಪಡೆಯುತ್ತಿದ್ದರೆಂಬುದೇ ಅದಕ್ಕೆ ಕಾರಣವಾಗಿತ್ತು.

★★★★★★

ಇಮಾಮ್ ಅಹ್ಮದರಿಗೆ ಹಣದ ಅಗತ್ಯ ಬಿತ್ತು. ತನ್ನ ಬಾಲ್ದಿಯನ್ನು ಅಡವಿರಿಸಿ ಸಾಲ ಪಡೆದರು. ಅನಂತರ ಹಣವನ್ನು ಮರಳಿಸಿದಾಗ ಸಾಲ ಕೊಟ್ಟವರು 2 ಬಾಲ್ದಿ ತಂದರು. ಅವುಗಳಲ್ಲಿ ಅಹ್ಮದರ ಬಾಲ್ದಿ ಯಾವುದೆಂದು ಅವರಿಗೆ ತಿಳಿದಿರಲಿಲ್ಲ. ಅಹದರಿಗೂ ಗುರುತಿಸಲಾಗಲಿಲ್ಲ. ಸಾಲ ಕೊಟ್ಟವ ಹೇಳಿದ: ''ಚಿಂತಿಲ್ಲ, ಯಾವುದಾದರೊಂದನ್ನು ತೆಗೆದು ಕೊಳ್ಳಿರಿ.''

ಆದರೆ ಅಹ್ಮದರು ಬಾಲ್ದಿಯನ್ನು ಪಡೆಯದೆ ಮರಳಿ ಹೋದರು.

★★★★★★

ಇಮಾಮ್ ಅಹ್ಮದರ ಪುತ್ರ ಅಬ್ದುಲ್ಲಾ ಒಂದು ಘಟನೆಯನ್ನು ವಿವರಿಸುತ್ತಾರೆ: ಖಲೀಫ ವಾಸಿಕ್‌ರ ಆಡಳಿತ ಕಾಲ. ನಾವು ತೀರಾ ಬಡವರಾಗಿದ್ದೆವು. ಇದನ್ನು ತಿಳಿದ ಓರ್ವ ಮಿತ್ರರು ನನ್ನ ತಂದೆಗೆ ಬರೆದರು: ''ನನ್ನ ಬಳಿ ನಾಲ್ಕು ಸಾವಿರ ಬೆಳ್ಳಿ ದಿರ್ಹಮ್‌ಗಳಿವೆ. ವಾರೀಸು ಭಾಗವಾಗಿ ದೊರೆತಿದೆ. ದಾನ ಅಥವಾ ಝಕಾತ್ ಆಗಿ ದೊರೆತುದಲ್ಲ. ನಿಮಗೆ ಸಹಮತವಿದ್ದರೆ ಕೊಡುತ್ತೇನೆ.''

ಆದರೆ ತಂದೆಯವರು ಅದನ್ನು ಸ್ವೀಕರಿಸಲಿಲ್ಲ. ಮಿತ್ರರು ಪುನಃ ಹಲವು ಬಾರಿ ಬರೆದರು. ಆದರೂ ತಂದೆ ಒಪ್ಪಲಿಲ್ಲ.

★★★★★★

ಇಮಾಮ್ ಅಹ್ಮದರು ಯಮನ್‌ನಿಂದ ಮರಳುವ ಸಿದ್ಧತೆ ನಡೆಸುತ್ತಿದ್ದರು. ತೀರಾ ಹಸಿವೆ! ಆಹಾರಕ್ಕೆ ಹಣವಿಲ್ಲ. ಆದ್ದರಿಂದ ತಮ್ಮ ಪಾದರಕ್ಷೆಯನ್ನು ಅಡವಿರಿಸಿ ಆಹಾರ ಸೇವಿಸಿದರು.

ಓರ್ವ ವ್ಯಾಪಾರಿಯು ಇಮಾಮ್ ಅಹ್ಮದರಿಗೆ 10,000 ಬೆಳ್ಳಿ ದಿರ್ಹಮ್ ಕೊಡುಗೆ ನೀಡಿ ಹೇಳಿದರು: ''ನಿಮ್ಮ ಹೆಸರಲ್ಲಿ ನಾನೊಂದು ವ್ಯಾಪಾರ ಆರಂಭಿಸಿದೆ. ಇದು ಅದರಲ್ಲಿ ದೊರೆತ ಲಾಭ. ದಯವಿಟ್ಟು ಸ್ವೀಕರಿಸಿರಿ.''

''ಕೃತಜ್ಞತೆ, ದೇವನು ಕೊಟ್ಟದ್ದೇ ನನಗೆ ಧಾರಾಳವಾಗಿದೆ'' ಇಮಾಮ್ ಅದನ್ನು ಸ್ವೀಕರಿಸಲಿಲ್ಲ.

★★★★★★

ಯಮನ್‌ಗೆ ಓರ್ವ ಕಾಝಿ ಬೇಕು. ಅದಕ್ಕಾಗಿ ಓರ್ವ ಯೋಗ್ಯ ವ್ಯಕ್ತಿಯನ್ನು ಹುಡುಕಿ ಕೊಡುವಂತೆ ಖಲೀಫಾ ಅಮೀನರು ಇಮಾಮ್ ಶಾಫಿಈಯವರಿಗೆ ತಿಳಿಸಿದರು. ಆರ್ಥಿಕವಾಗಿ ಕಷ್ಟದಲ್ಲಿದ್ದ ಅಹ್ಮದರಿಗೆ ಸಹಾಯಕವಾಗಲೆಂದು ಭಾವಿಸಿ ಆ ಹುದ್ದೆಯನ್ನು ವಹಿಸುವಿರಾ ಎಂದು ಶಾಫಿಈ ವಿಚಾರಿಸಿದರು.

ಆಮಂತ್ರಣವನ್ನು ಪ್ರೀತಿಯಿಂದ ತಿರಸ್ಕರಿಸಿ ಅಹ್ಮದ್ ಹೇಳಿದರು: ''ಶೈಖ್, ಇನ್ನು ಮುಂದೆ ನಿಮ್ಮಿಂದ ಇಂಥ ಬೇಡಿಕೆ ಬಂದರೆ ಆನಂತರ ನಮ್ಮ ಪರಸ್ಪರ ಭೇಟಿಯಾಗಲಾರದು.''

★★★★★★

ಖಲೀಫಾ ಮಅ್‌ಮೂನರು ಹದೀಸ್ ವಿದ್ವಾಂಸರಿಗೆ ಸ್ವಲ್ಪ ಚಿನ್ನವನ್ನು ಪಾರಿತೋಷಕವಾಗಿ ನೀಡಿದರು. ಅವರು ಅದನ್ನು ಹಂಚಿಕೊಂಡರು. ಆದರೆ ಇಮಾಮ್ ಅಹ್ಮದರು ಅದರಿಂದ ಒಂದು ತುಂಡನ್ನೂ ಸ್ವೀಕರಿಸಲಿಲ್ಲ.

★★★★★★

ಇಮಾಮ್ ಅಹ್ಮದರ ಪುತ್ರ ಅಬ್ದುಲ್ಲಾ ಒಂದು ಘಟನೆಯನ್ನು ವಿವರಿಸುತ್ತಾರೆ:

ಖಲೀಫ ಮುತವಕ್ಕಿಲರ ಆಮಂತ್ರಣ ಪ್ರಕಾರ ನನ್ನ ತಂದೆ ಅರಮನೆಗೆ ಹೋದರು. ಅರೆ ಮನಸ್ಸಿನಿಂದ 16 ದಿನ ಅಲ್ಲಿ ತಂಗಿದರು. ಆ ದಿನಗಳಲ್ಲಿ ಜೀವರಕ್ಷಣೆಗೆ ಬೇಕಾಗುವ ಅತ್ಯಲ್ಪ ಆಹಾರವನ್ನು ಸೇವಿಸುತ್ತಿದ್ದರು. ಎಲ್ಲ ದಿನವೂ ಖಲೀಫರು ಉತ್ತಮ ಭಕ್ಷ್ಯಪದಾರ್ಥಗಳನ್ನು ಕಳುಹಿಸಿ ಕೊಡುತ್ತಿದ್ದರು. ಆದರೆ ತಂದೆಯವರು ಅದನ್ನು ಮುಟ್ಟಿಯೂ ನೋಡುತ್ತಿರಲಿಲ್ಲ. ಆ ದಿನಗಳಲ್ಲಿ ಉಪವಾಸ ಆಚರಿಸಿದರು. ಕೊನೆಗೆ ಮರಳುವಾಗ ಬಹಳಷ್ಟು ಸೊರಗಿದ್ದರು. ಆರೋಗ್ಯವು ಪೂರ್ವಸ್ಥಿತಿಗೆ ಮರಳಲು 6 ತಿಂಗಳು ಹಿಡಿಯಿತು.

★★★★★★

ಇಮಾಮ್ ಅಹ್ಮದ್ ಹೇಳಿದರು: ''ಅಲ್ಲಾಹನ ಹೊರತು ಬೇರೆ ಯಾರಿಂದಲೂ ಏನನ್ನೂ ನಿರೀಕ್ಷಿಸದಿರುವುದೇ ತವಕ್ಕುಲ್ ಆಗಿದೆ. (ಅಲ್ಲಾಹನಲ್ಲಿ ಭರವಸೆಯಿರಿಸುವುದು). ವೈರಿಗಳು ಪ್ರವಾದಿ ಇಬ್ರಾಹೀಮರನ್ನು ಅಗ್ನಿ ಕುಂಡಕ್ಕೆಸೆದಾಗ ಅವರೊಡನೆ ದೇವಚರ ಜಿಬ್ರೀಲ್ ಕೇಳಿದರು: ''ನನ್ನಿಂದ ಏನಾದರೂ ಸಹಾಯ ಬೇಕಾದರೆ ತಿಳಿಸಿರಿ.''

''ನಿಮ್ಮಿಂದ ನನಗೇನೂ ಬೇಕಾಗಿಲ್ಲ.''

''ಹಾಗಾದರೆ ಅಲ್ಲಾಹನಿಂದ ಸಹಾಯ ಯಾಚಿಸಬಹುದಲ್ಲವೇ.''

''ಎಲ್ಲ ವಿಷಯಗಳಲ್ಲಿಯೂ ಅಲ್ಲಾಹನ ಇಷ್ಟವೇ ನನ್ನಿಷ್ಟ.''

★★★★★★

ಇಮಾಮ್ ಶಾಫಿಈಯವರು ಇಮಾಮ್ ಅಹ್ಮದರೊಡನೆ ವಿನಂತಿಸಿದರು. ''ನಿಮಗೆ ಸಹೀಹ್ ಆಗಿರುವ ಹದೀಸ್ ದೊರೆತರೆ ನನಗೆ ತಿಳಿಸಬೇಕು. ಅರೇಬಿಯಾ, ಸಿರಿಯಾ, ಯಮನ್ ಅಥವಾ ಇರಾಕ್‌ನಿಂದ ದೊರೆತರೂ ನಾನು ಅದನ್ನು ಸ್ವೀಕರಿಸುತ್ತೇನೆ.''

★★★★★★

ಭಿಕ್ಷೆ ಕೇಳಿ ಬಂದ ಓರ್ವ ಯಾಚಕನಿಗೆ ಅಹ್ಮದರು ಒಂದು ತುಂಡು ರೊಟ್ಟಿ ಕೊಟ್ಟರು. ಇದನ್ನು ನೋಡಿದ ಓರ್ವರು ಆ ರೊಟ್ಟಿಯನ್ನು ತನಗೆ ಕೊಡುವಂತೆ ಆ ಭಿಕ್ಷುಕನೊಡನೆ ಕೇಳಿದರು. ಅದಕ್ಕೆ ಪ್ರತಿಯಾಗಿ ಒಂದು ದಿರ್ಹಮ್ ಬೆಲೆಯ ವಸ್ತುವನ್ನು ಕೊಡುತ್ತೇನೆಂದು ಹೇಳಿದರು.

ಭಿಕ್ಷುಕ ಒಪ್ಪಲಿಲ್ಲ. ಆತ ಬೆಲೆಯನ್ನು ಏರಿಸುತ್ತಲೇ ಹೋದ. ಕೊನೆಗೆ 50 ದಿರ್ಹಮ್‌ಗೆ ತಲುಪಿತು. ಆದರೂ ಭಿಕ್ಷುಕ ರೊಟ್ಟಿಯ ತುಂಡನ್ನು ಕೊಡಲಿಲ್ಲ. ಆತ ಹೇಳಿದ: ''ನೀನು ಇದರ ಬರ್ಕತ್(ಸಮೃದ್ಧಿ) ನಿನಗೆ ದೊರೆಯಬೇಕೆಂದು ಬಯಸುತ್ತಿರುವೆಯಲ್ಲವೇ? ನನ್ನ ಬಯಕೆಯೂ ಅದೇ ಆಗಿದೆ.

★★★★★★

ಇಮಾಮ್ ಅಹ್ಮದ್ ಹೇಳಿದರು: ನಾನು ಐದು ಬಾರಿ ಹಜ್ಜ್ ನಿರ್ವಹಿಸಿದ್ದೇನೆ. ಮೂರು

ಬಾರಿ ಕಾಲ್ನಡಿಗೆಯಲ್ಲಿ, ಪ್ರತಿಯೊಂದಕ್ಕೂ 30 ದಿರ್ಹಮ್ ಖರ್ಚಾಯಿತು. ಒಮ್ಮೆ ನನಗೆ ದಾರಿ ತಪ್ಪಿತು. ಸಿಕ್ಕಿದವರೊಡನೆ ವಿಚಾರಿಸುತ್ತಾ ಕೊನೆಗೆ ದಾರಿ ಕಂಡು ಹಿಡಿದೆ.

★★★★★★

ಇಮಾಮ್ ಅಹ್ಮದರ ಕಾಲದಲ್ಲಿ, ಕುರ್‌ಆನ್ ಸೃಷ್ಟಿಯೋ ಅಲ್ಲವೋ ಎಂಬ ವಿವಾದ ಉಲ್ಬಣವಾಯಿತು. ಒಂದೆಡೆ ಅಹ್ಲುಸುನ್ನತ್‌ನವರಿದ್ದರೆ ಇನ್ನೊಂದೆಡೆ ಮುಅ್‌ತಝಿಲರು, ಕುರ್‌ಆನ್ ಸೃಷ್ಟಿಯಲ್ಲವೆಂದು ಅಹ್ಲುಸುನ್ನತ್ ಹೇಳಿದರೆ ಸೃಷ್ಟಿಯೆಂದು ಮುಅ್‌ತಝಿಲರು. ವಿದ್ವಾಂಸರು ಮಾತ್ರವಲ್ಲ ಆಡಳಿತಗಾರರೂ ಈ ವಿವಾದದಲ್ಲಿ ಸಕ್ರಿಯರಾಗಿದ್ದರು.

ರಾಷ್ಟ್ರನಾಯಕರಾಗಿದ್ದ ಖಲೀಫ ಮಅ್‌ಮೂನ್, ಮುಅ್‌ತಝಿಲರ ಧೋರಣೆಯನ್ನು ಬೆಂಬಲಿಸಿದರು. ಇಮಾಮ್ ಅಹ್ಮದರು ಅಹ್ಲುಸುನ್ನತ್ತನ್ನು ಸಮರ್ಥಿಸಿದರು.

ಮಅ್‌ಮೂನರು ತಮ್ಮ ಅಭಿಪ್ರಾಯವನ್ನು ಬಲಾತ್ಕಾರವಾಗಿ ಹೇರಲು ನಿರ್ಧರಿಸಿದರು. ಆ ಕುರಿತು ರಾಜ್ಯಪಾಲರುಗಳಿಗೆ ಆಜ್ಞೆ ಹೊರಡಿಸಿದರು.

ಬಗ್ದಾದ್‌ನ ರಾಜ್ಯಪಾಲರು ಇಮಾಮ್ ಅಹ್ಮದ್ ಮತ್ತಿತರ ವಿದ್ವಾಂಸರನ್ನು ಕರೆಸಿದರು. ಮಅ್‌ಮೂನರ ದೃಷ್ಟಿಕೋನವನ್ನು ಅಂಗೀಕರಿಸುವಂತೆ ಒತ್ತಾಯಿಸಿದರು. ನಿರಾಕರಿಸಿದರೆ ಶಿಕ್ಷೆ ನೀಡುವುದಾಗಿ ಬೆದರಿಸಿದರು. ಇಮಾಮ್ ಅಹ್ಮದ್ ಮತ್ತು ಮುಹಮ್ಮದ್ ಬಿನ್ ನೂಹರ ಹೊರತು ಇತರೆಲ್ಲರೂ ರಾಜ್ಯಪಾಲರ ಬೆದರಿಕೆಗೆ ಮಣಿದರು.

ಅಹ್ಮದ್ ಮತ್ತು ಮುಹಮ್ಮದರನ್ನು ಮಅ್‌ಮೂನರ ಬಳಿಗೆ ಕಳಿಸಿದರು. ಮುಹಮ್ಮದರು ಅರ್ಧದಾರಿಯಲ್ಲಿ ಹುತಾತ್ಮರಾದರು.

ಆದರೆ ಅಹ್ಮದರನ್ನು ದಂಡಿಸಲು ಮಅ್‌ಮೂನರಿಗೆ ಸಾಧ್ಯವಾಗಲಿಲ್ಲ, ಅದಕ್ಕಿಂತ ಮುಂಚೆಯೇ ಮಅ್‌ಮೂನ್ ನಿಧನರಾದರು.

ಅನಂತರ ಬಂದ ಖಲೀಫರಾದ ಮುಅ್‌ತಸಿಮ್ ಮತ್ತು ವಾಸಿಕ್‌ರ ಕಾಲದಲ್ಲಿಯೂ ಇಮಾಮ್ ಅಹ್ಮದರು ತೀವ್ರ ಹಿಂಸೆಯನ್ನು ಅನುಭವಿಸಬೇಕಾಯಿತು. ಹಿಂಸೆ ಮತ್ತು ಆಮಿಷದಿಂದ ಅಹ್ಮದರ ಅಭಿಪ್ರಾಯವನ್ನು ಬದಲಾಯಿಸಲು ಮುಅ್‌ತಸಿಮ್ ಪದೇ ಪದೇ ಪ್ರಯತ್ನಿಸಿದರು. 28 ತಿಂಗಳು ಛಡಿಯೇಟು, ಪ್ರಜ್ಞೆ ತಪ್ಪಿದಾಗ ಭರ್ಚಿಯ ಮೊನೆಯಿಂದ ಚುಚ್ಚಿ ಗಾಯಗೊಳಿಸುತ್ತಿದ್ದರು. ಜೈಲಿನ ಹೊಂಡಕ್ಕೆ ಎತ್ತಿಹಾಕುವ ವಿವಿಧ ರೀತಿಯ ಮರ್ದನಗಳನ್ನು ಪ್ರಯೋಗಿಸಿದರು. ಆದರೂ ಇಮಾಮ್ ಅಹ್ಮದರು ಅಭಿಪ್ರಾಯ ಬದಲಾಯಿಸಲಿಲ್ಲ.

ಕೊನೆಗೆ ಮುಅ್‌ತಸಿಮ್ ಅವರನ್ನು ವಿಮೋಚನೆ ಗೊಳಿಸಿದರು. ಅಹ್ಮದರು ಜೈಲಿನಿಂದ ಗಾಯಾಳುವಾಗಿ ಮನೆಗೆ ಮರಳಿ ವಿಶ್ರಾಂತಿ ಪಡೆದರು. ಗಾಯವು ವಾಸಿಯಾಗಿ

ನಡೆದಾಡಲು ಸಾಧ್ಯವಾದಾಗ ಮಸೀದಿಗೆ ಹೋಗಿ ಪಾಠ ಪ್ರವಚನ ಆರಂಭಿಸಿದರು.

ವಾಸಿಕ್ ಅಧಿಕಾರಕ್ಕೇರಿದಾಗ ಬೇರೊಂದು ರೀತಿಯಲ್ಲಿ ಪರೀಕ್ಷಿಸಲಾಯಿತು. ದೈಹಿಕ ಹಿಂಸೆಯಿಂದ ಅಹ್ಮದರ ಜನಪ್ರಿಯತೆ ಹೆಚ್ಚುವುದೆಂದು ಮನಗಂಡ ವಾಸಿಕ್, ಅಹ್ಮದರು ಮಸೀದಿಗೆ ಬಂದು ಪಾಠ ಪ್ರವಚನ ನೀಡುವುದನ್ನು ನಿಷೇಧಿಸಿದರು. ಸುಮಾರು ಐದು ವರ್ಷ ಈ ನಿಷೇಧ ಉಳಿಯಿತು.

ಕ್ರಿ.ಶ. 847ರಲ್ಲಿ ಮುತವಕ್ಕಿಲ್ ಅಧಿಕಾರ ವಹಿಸಿದ ಬಳಿಕ ಅಹ್ಲುಸುನ್ನತ್‌ನ ದೃಷ್ಟಿಕೋನಕ್ಕೆ ಎರಡನೇ ಬಾರಿ ಅಧಿಕೃತ ಅಂಗೀಕಾರ ದೊರೆಯಿತು. ಇದರಿಂದ ಅಹ್ಮದರಿಗೆ ಸ್ವಾತಂತ್ರ್ಯ ಮರಳಿ ದೊರೆಯಿತು. ಅವರು ಪಾಠ ಪ್ರವಚನವನ್ನು ಪುನರಾರಂಭಿಸಿದರು.

★★★★★★

ಇಮಾಮ್ ಅಹ್ಮದರ ಮೃತದೇಹವನ್ನು ಎಂಟು ಲಕ್ಷ ಪುರುಷರು ಮತ್ತು 60,000 ಮಹಿಳೆಯರು ಸಂದರ್ಶಿಸಿದರು. ಅವರು ನಿಧನರಾದ ದಿನ 20,000 ಮಂದಿ ಹೊಸತಾಗಿ ಇಸ್ಲಾಮ್ ಧರ್ಮ ಸೇರಿದರು.

ಖಲೀಫ ಅಲ್ ಮುಸ್ತದೀಅ್ ಇಮಾಮ್ ಅಹ್ಮದರ ಗೋರಿಯ ಮೇಲೆ 'ಸುನ್ನತ್‌ನ ಮಹಾ ಸಂರಕ್ಷಕ' ಎಂಬ ಶಿಲಾ ಫಲಕವನ್ನು ಸ್ಥಾಪಿಸಿದರು. ಕ್ರಿ.ಶ. 14ನೇ ಶತಮಾನದಲ್ಲಿ ಟೈಗ್ರಿಸ್ ನದಿಯಲ್ಲಿ ಸಂಭವಿಸಿದ ನೆರೆಯಲ್ಲಿ ಈ ಗೋರಿಯು ಕೊಚ್ಚಿ ಹೋಯಿತು.

